# ಅರ್ಪಣೆ.

ಚಿಕ್ಕಂದಿನಲ್ಲಿಯೇ

ತಾಯಿಯನ್ನು ಕಳಕೊಂಡ ನನಗೆ

ತಿಲಮಾತ್ರವೂ ತಾಯ್ತನದ ಕೊರತೆ

ಕಾಣಗೊಡದೆ ಕಾಪಾಡಿಕೊಂಡು ಬಂದ

ನನ್ನ

ಪರಮ ಪೂಜ್ಯ

ತಂದೆಯವರ

ಅಡಿದಾವರೆಗಳಲ್ಲಿ ಅರ್ಪಣೆ.

—ಅನುವಾದಕ.

ಗೋಕರ್ಣ ಕರ್ನಾಟಕ ಸಂಘದ ಪ್ರಕಟಣೆ.

# ಕಾಂಚನಮೃಗ

(ಸಾಮಾಜಿಕ ಕಾದಂಬರಿ)

ಭಾಗ ೨.

ಅನುವಾದಕರು:

ಶಾಂ. ದಾ. ಶಹಾಣೆ.

೧೯೪೭.

ಬೆಲೆ ೧—೪—೦

ಪರ್ಣಕುಟಿ ಗ್ರಂಥಮಾಲೆ

ಗೋಕರ್ಣ.

ಸಂಪಾದಕ ಮಂಡಲ:

ಎನ್. ಡಿ. ಕುಲಕರ್ಣಿ, ಎಂ ಎ
ವಿ. ಜಿ. ಭಟ್ಟ, ಬಿ. ಎ
ಕೇ. ಜಿ. ಶಾಸ್ತ್ರೀ, ಬಿ ಎ.
ಗೌರೀಶಂಕರ ಕಾಯ್ಕಿಣಿ
ಸು. ರಂ ಯಕ್ಕುಂಡಿ, ಬಿ ಎ., ಬಿ ಟಿ



ಪ್ರಕಾಶಕರು:
ಮಾ. ಗ. ಶೆಟ್ಟಿ,
ಗೌರವ ಕಾರ್ಯದರ್ಶಿ, ಕರ್ನಾಟಕ ಸಂಘ, ಗೋಕರ್ಣ.

ಇದು ಶ್ರೀ॥ ಗಣಪತಿ ರಾಮರಾವ ಮಾಸೂರ ಇವರಿಂದ
ಕುಮಟಾ ಶ್ರೀ ರಾಮಕೃಷ್ಣ ಪ್ರಿಂಟಿಂಗ್ ವರ್ಕ್ಸ, ಲಿಮಿಟೆಡ್‌ದಲ್ಲಿ ಮುದ್ರಿತವಾಗಿ
ಶ್ರೀ॥ ಮಾ. ಗ. ಶೆಟ್ಟಿ, ಗೌರವಕಾರ್ಯದರ್ಶಿ, ಕರ್ನಾಟಕ ಸಂಘ, ಇವರಿಂದ
ಗೋಕರ್ಣದಲ್ಲಿ ಪ್ರಕಾಶಿಸಲ್ಪಟ್ಟಿತು.

# ಪ್ರಕರಣ ೧೫.

ಈಗ ಸುಧಾಕರನ ಮುಂದಿದ್ದುದು ಎರಡೇ ಕೆಲಸ — ಸುಧೆಗೆ ಕಲಿಸುವದೊಂದ, ಗಂಗಾಧರನಿಗೆ ಕೆಲಸ ಕೊಡಿಸುವದಿನ್ನೊಂದ. ರಾತ್ರಿಯ ಸಂಕಟದಲ್ಲಿ ಜಾನಕಿಯಮ್ಮ ನೆರವಾದುದಕ್ಕಾಗಿ ಸುಧಾಕರನ ಮೇಲೆ ಸುಧೆಯ ಅತ್ತಿಗೆಯ ಕೋಪ ಕಡಿಮೆಯಾಗಿತ್ತಾದರೂ ಸುಧೆಯನ್ನು ಎಲ್ಲರಂತೆ ಅವನ ಮನೆಗೆ ಕಳಿಸುವುದು ಸಾಧ್ಯವಿರಲಿಲ್ಲ. ಸಾಲೆಯಲ್ಲಿ ಸಿಪಾಯಿ ಕೆಲಸಕ್ಕೆ ಗಂಗಾಧರನನ್ನು ನಿಯಮಿಸಬೇಕೆಂದಿದ್ದ. ಆದರೆ ಹೆಡ್‌ಮಾಸ್ತರರು ತಮ್ಮ ಪರಿಚಿತನೊಬ್ಬನಿಗೆ ಮಾತ ಕೊಟ್ಟಿದ್ದರಿಂದ ಅದೂ ಸಾಧ್ಯವಾಗಲಿಲ್ಲ. ಮನೆಯಲ್ಲಿಯೂ ಗಂಗಾಧರನಿಗೆ ಕೊಡತಕ್ಕಂತಹ ಕೆಲಸವಿರಲಿಲ್ಲ. ಬಸಿರಿದ್ದ ಯಮುನೆಗೆ ನಸುಕಿನಲ್ಲಿ ಹೊಲಕ್ಕೆ ಹೋಗಿ ಬರುವದು ಕಷ್ಟವಾಗತೊಡಗಿದ್ದರಿಂದ ಮುಸುರೆ ತಿಕ್ಕುವದಕ್ಕಾಗಿ ತಮ್ಮಲ್ಲಿ ಕೆಲಸ ಕೊಟ್ಟಿದ್ದ ದಾದಾಸಾಹೇಬರ ಹೆಂಡತಿಯೂ ಕೆಲಸದಾಕೆಯನ್ನು ಬಿಟ್ಟಿದ್ದರಿಂದ ಅಲ್ಲಿಯ ಕೆಲಸವೂ ಅವಳಿಗೇ ದೊರೆಯಿತು.

ಸಾಲೆ ಶುರುವಾಗಿ ಐದಾರು ದಿನ ಸಂದಿವೆ. ಸುಧಾಕರನು ಜೆಳಗ್ಗೆ ಸಾಲೆಯಲ್ಲಿ ಕಲಿಸಬೇಕಾದ ಪಾಠದ ತಯಾರಿ ನಡೆಸಿದ್ದ. ಅಷ್ಟರಲ್ಲಿ ದಾದಾಸಾಹೇಬರು ಸುಧೆಯನ್ನು ಕರೆದುಕೊಂಡು ಬಂದು 'ಜಾನಕಿಯಮ್ಮನನ್ನು ಕರೆ' ಅಂದರು. ಜಾನಕಿಯಮ್ಮ ಬಂದು ಬಾಗಿಲ ಒಳ ನಿಂತಳು.

"ನೋಡಿ, ನಿಮ್ಮ ಕಡೆ ಕ್ಷಮೆ ಬೇಡಿಕೊಳ್ಳುವದಕ್ಕೆ ಬಂದಿದ್ದೇನೆ. ಹೆಂಗಸರು ಏನಾದರೂ ಒಂದು ಮಾಡಿ ಬಿಡುತ್ತಾರೆ. ಪತ್ರಿಕೆಯಲ್ಲಿ ಎಲ್ಲ ರೋಗ ಗುಣಮಾಡುವ ಔಷಧದ ಜಾಹೀರಾತು ಓದಿದ್ದೇನೆ. ಆದರೆ ಜನರ ದುಸ್ವಭಾವಕ್ಕೆ ಮಾತ್ರ ಮದ್ದಿಲ್ಲ. ಇರಲಿ. ಮಾಲಾಗಲಿಯಲ್ಲಿ ಸುಧೆಯು ನಿಮ್ಮ ಮನೆಯಲ್ಲಿ ಒಂದು ರಾತ್ರಿ ಮಲಗಿದ್ದಳಂತೆ. ಅದಕ್ಕಾಗಿ ನಮ್ಮ ಮನೆಯವಳು ದೊಡ್ಡದೊಂದು ರಾಮಾಯಣ ರಚಿಸಿಬಿಟ್ಟು ನಿಮ್ಮ ಮನೆಗೆ ಸುಧೆ ಸುಳಿಯದಂತೆ ಮಾಡಿಬಿಟ್ಟಳಂತೆ. ನಿನ್ನೆ ರಾತ್ರಿ ಇದೆಲ್ಲ

ನನಗೆ ಗೊತ್ತಾಯಿತು. ಹೂಂ! ಅದಷ್ಟೆಲ್ಲ ಮರೆತು ಬಿಡಿ ನಾನು ಸುಧಾಕರ ಬೇರೆಯಲ್ಲ. ಶಾಲೆಯೇ ನಮ್ಮಿಬ್ಬರ ತಾಯಿ. ಅದರ ಸೇವೆಗೋಸ್ಕರವೇ ನಾವಿಬ್ಬರೂ ಕಷ್ಟ ಪಡುವವರಾದ್ದರಿಂದ ನಮ್ಮಲ್ಲಿ ಸಂಕೋಚವೇಕೆ? ಸುಧೆಯು ನನ್ನ ತಂಗಿಯಾಗಿದ್ದರೂ ನಿಮ್ಮ ಮಗಳಂತೆ ತಿಳಿಯಿರಿ. ಸುಧಾಕರರಾ, ಈಕೆ ರಾತ್ರಿ-ಅಪರಾತ್ರಿ ಯಾವಾಗ ಬಂದರೂ ನನಗೆ ಳ್ಳಷ್ಟು ಕೆಡುಕೆನಿಸದು. ಅಮ್ಮನವರೂ ಒಬ್ಬರೇ ಇದ್ದಾರೆ ಅಲ್ಲದೆ ವಯಸ್ಸೂ ಆಗಿಬಿಟ್ಟಿದೆ. ನಿಮಗೆ ಬೇಕಾದಾಗ ಕರೆಯಿಸಿಕೊಳ್ಳಿ."

ದಾದಾ ಸಾಹೇಬರ ಮಾತಿನ ರೀತಿ ಸುಧಾಕರನಿಗೆ ರುಚಿಸದಿದ್ದರೂ ಕುರೂಪಿಯ ಕೋಮಲ ಹೃದಯದಂತೆ ಅವರ ಮಾತು ಭಾವಪೂರ್ಣವಾಗಿದೆಯೆಂದು ಅನಿಸಿತು.

"ನಿಮ್ಮೊಡನೆ ಮಧುಕರನೇಕೆ ಬರಲಿಲ್ಲ?"

"ಎಷ್ಟೆಂದರೂ ಅವರು ಕವಿಯಲ್ಲವೇ? ಕವಿತೆ ಬರೆಯುವದಕ್ಕೆಂದು ರಾತ್ರಿ ಎಲ್ಲ ಜಾಗರಣೆ ಮಾಡಿ ಎಂಟು ಘಂಟೆಗೆ ಏಳುತ್ತಾರೆ. ನಾನು ಬರುವಾಗ ಅಷ್ಟೇ ಹಾಸಿಗೆಯಿಂದ ಎದ್ದಿದ್ದರು. ಈ ಕವಿತಾ ಬರೆಯುವ ಕೆಲಸವೆಂದರೆ ಬಹಳ ತ್ರಾಸದಾಯಕ ಎಂದು ಕಾಣುತ್ತಿದೆ"

ಸುಧಾಕರ ಮಾತಾಡಲಿಲ್ಲ. ಕಲಿಸುವದಕ್ಕೆ ಹತ್ತಿ ಇನ್ನೂ ಎಂಟು ದಿವಸವಾಗಲಿಲ್ಲ. ಮಧುಕರನು ಕವನ ಬರೆಯುವದರಲ್ಲಿ ಗುಂಗಾಗಿರುವನೇ? ಎಂದು ಯೋಚಿಸುತ್ತಿದ್ದ

ತನ್ನ ಮಾತು ಸುಧಾಕರನಿಗೆ ರುಚಿಸಿರಲಿಕ್ಕಿಲ್ಲವೆಂದು ಭಾವಿಸಿ ದಾದಾಸಾಹೇಬರು "ನೀವು ಯಾರಿಗೋ ಒಂದು ಕೆಲಸ ಹುಡುಕುತ್ತಿದ್ದಿರಲ್ಲ." ಎಂದರು.

"ಅಹುದು, ಎಲ್ಲಿಯಾದರೂ ಸಿಗುವಂತಿದೆಯೋ?"

"ರಾವಸಾಹೇಬರ ಮನೆ ಕಾಯಲಿಕ್ಕೆ ಒಬ್ಬ ಆಳು ಬೇಕಾಗಿದೆಯಂತೆ."

"ಹಾಗಾದರೆ ಸ್ವಲ್ಪ ಹೇಳಿ ನೋಡಿ."

"ಓಹೋ, ಅವಶ್ಯವಾಗಿ ಮಾಡುತ್ತೇನೆ. ಆದರೆ ರಾವಸಾಹೇಬರ ಇನ್ನೊಂದು ಕೆಲಸ- ಅವರ ಹುಡುಗಿಗೆ ಓದಿಸುವದು ನಿಮ್ಮಿಂದ ಆಗ ಬೇಕು.

"ಮಧುಕರನಿಂದ ಆಗಲಿಕ್ಕಿಲ್ಲವೇ?"

"ಮಧುಕರನಂತೂ ಸಿದ್ಧನಿದ್ದಾನೆ ಆದರೆ ರಾವಸಾಹೇಬರಿಗೆ ಎಂಎ ಮಾಸ್ತರನು ಬೇಕಂತೆ."

"ಹಾಗಾದರೆ ತಿಂಗಳಾ ನೂರಾರು ರೂಪಾಯಿ ವೆಚ್ಚಮಾಡಿ ಯಾರನ್ನಾದರೂ ಇಟ್ಟುಕೊಳ್ಳಲಿ."

"ನೋಡಿ, ಹುಚ್ಚನ ಹೇಳಿಕೆಯಂತೆ ನಡೆದರೆ ಅವರಂತಹ ಜನರು ಇನ್ನೊಬ್ಬರಿಲ್ಲ. ಸಾಲೆ ನಡೀಬೇಕು ಅಂತ ಇದ್ದರೆ ಇಂತಹ ಹಣವಂತರನ್ನು ಕಟ್ಟಿಕೊಳ್ಳಬೇಕಾಗುತ್ತಿದೆ. ಅವರ ಸಹಾಯದಿಂದಲೇ ಮುಂಚೆಯಲ್ಲಿ ಸಾಲೆ ಬಗ್ಗೆ ಒಂದು ಸಾವಿರ ರೂಪಾಯಿ ದೊರೆತಿವೆ. ನೀವು ಅವರ ಹುಡುಗಿಗೆ ಕಲಿಸಲು ಒಪ್ಪಿದರೆ ಇನ್ನೆರಡು ಮೂರು ತಿಂಗಳಲ್ಲಿ ಅವರಿಂದ ಇನ್ನೊಂದು ಸಾವಿರ ಎಬ್ಬಿಸುತ್ತೇನೆ. ಆ ಮೇಲೆ ನಮ್ಮ ಸಾಲೆಗೊಂದು ಒಳ್ಳೆ ವ್ಯಾಯಾಮಸಾಲೆ ಕಟ್ಟಿಸೋಣ."

ಸಾಲೆಯ ಉದ್ಧಾರದ ಕಲ್ಪನೆ ಬಂದೊಡನೆ ವಾರುಣಿಗೆ ಕಲಿಸಲು ಒಪ್ಪಿದ. ಆಕೆಯ ಸೌಂದರ್ಯದ ಸೆಳೆತವು ಸದ್ದಿಲ್ಲದೆ ಅವನ ಮನಸ್ಸನ್ನು ತಿರುಗಿಸಿರಬಹುದು. ವಾರುಣಿಯು "ನನಗೆ ಒಳ್ಳೇ ಮಾರ್ಗ ತೋರಿಸಿರ"ಂದು ತನ್ನ ಬಳಿಯಲ್ಲಿ ಬೇಡುತ್ತಿರುವಂತೆ ಭಾಸವಾಯಿತು.

+ × × × ×

ಸುಧಾಕರನು ಲಗುಬಗೆಯಿಂದ ಪತ್ರ ಬರೆಯುತ್ತಿದ್ದುದರಿಂದ ಸುಧೆಯು ಬಂದುದು ಗಮನಕ್ಕೆ ಬಂದಿರಲಿಲ್ಲ. ಆಕೆಯು ಸಮಾಧಿಸ್ಥ ಸಾಧುವಿನೆಡೆಗೆ ಆದರದಿಂದ ನೋಡುವ ಸಾಮಾನ್ಯ ಮನುಷ್ಯನಂತ

ಸುಧಾಕರನನ್ನು ನೋಡುತ್ತ ನಿಂತಿದ್ದಳು. "ಹ! ಮುಗಿಯಿತಪ್ಪ "ಎಂದು ಸುಧಾಕರನು ಕೊನೆಗೆ ಒಮ್ಮೆ ಮೈಮುರಿದುಕೊಂಡ

"ಬರೆದು ಮುಗಿಯಿತೇ ಗ್ರಂಥ?" ಎಂದು ಸುಧೆಯು ಕೇಳಿದಳು. "ಹೂಂ,ಬೇಕಾದರೆ ಓದಿನೋಡಿ. ಒಮ್ಮೆ ಗುರುವಿನ ಅಕ್ಷರದ ಪರಿಚಯ ವಾದರೂ ಆದೀತು." ಎಂದು ಸುಧಾಕರನು ಪೊವಲೊಮ್ಮೆ ಚತುರ ನಾದರೂ ಸಮಾಧಾನದಿಂದ ಉತ್ತರವನ್ನಿತ್ತ.

ಸುಧೆಯು ಪತ್ರವನ್ನು ಓದಹತ್ತಿದಳು—

ಜಯಗಾಂವ
೧೭ ಜೂನ ೧೯೩೬

ನಿನಗೆ ಬರುವ ತಿಂಗಳ ವರೆಗೆ ಪತ್ರಹಾಕಬಾರದೆಂದು ಬಯಸಿದ ಆದರೆ ಇಂದು ನನಗಾದ ಆನಂದದಲ್ಲಿ ಪಾಲು ಕೊಡದಿದ್ದರೆ ಅಜೀರ್ಣ ವಾಗಬಹುದೆಂಬ ಭಯದಿಂದ ಸಾಲೆಯಿಂದ ಬಂದೊಡನೆಯೇ ಪತ್ರ ಬರೆಯುತ್ತಲಿರುವೆ.

''ನಮ್ಮ ಸಾಲೆಯಲ್ಲಿ ಇಂದು ಆಗರಕರ ಸ್ಮಾರಕದಿನವನ್ನು ಆಚ ರಿಸಿದ್ದೆವು. ನನ್ನದೇ ಮುಖ್ಯ ವ್ಯಾಖ್ಯಾನವಿತ್ತು ಇನ್ನೂರು ಐವತ್ತು ವಿದ್ಯಾರ್ಥಿಗಳ ಆತ್ಮದೊಡನೆ ಮಾತನಾಡುವ ಸಂಧಿ ಇಂದು ನನಗೆ ದೊರೆಯಿತು. ಹಳ್ಳಿಯ ಎರಡೂವರೆ ನೂರು ವಿಕಾಸೋನ್ಮುಖ ಹೃದಯ ಗಳಲ್ಲಿ ಇಂದು ನಾನು ಸಮಾಜ ಸೇವೆಯ ಬೀಜ ಬಿತ್ತಿದ್ದೇನೆ ಆ ಬಾಲ ಕರ ಮನಸ್ಸಿನಲ್ಲಿ ಮಹತ್ವಾಕಾಂಕ್ಷೆಯ ಜ್ಯೋತಿಯನ್ನು ಪ್ರಜ್ವಲಿಸಿದ್ದೇನೆ. ಆಗರಕರರು ತಾಯಿಗೆ ಬರೆದ "ಎಂ. ಏ. ಆದರೂ ಹಣದ ಬಿಸಿಲುಗು ದುರೆಯನ್ನು ಬಯಸದೆ ಬಡವರಿಗೆ ಶಿಕ್ಷಣ ಕೊಡುವುದರಲ್ಲಿಯೇ ನನ್ನ ಆಯುಷ್ಯ ಕಳೆಯುವವನಿದ್ದೇನೆ." ಎಂಬ ವಾಕ್ಯವನ್ನು ಹೇಳುವಾಗ ಕುತ್ತಿಗೆ ಗದ್ಗದವಾಯಿತು. ಆಗ ಹೆಡ್ ಮಾಸ್ತರರು ಕರ ತಾಡನ ಮಾ ಡಿದರು ಇನ್ನೂರು ಐವತ್ತು ಹುಡುಗರ ಚಪ್ಪಾಳೆಯಿಂದ ಕಿವಿ ಗಡಚಿಕ್ಕಿದ ವು. ನಾಳೆ ಈ ಕೈಗಳು ನಮ್ಮ ಮಾತೃಭೂಮಿಯನ್ನು ಪಂಕದಿಂದೆತ್ತಲು

ಎತ್ತಲು ಮುಂದೆ ಬರಬಹುದು. ಆ ಮೂರು ವರುಷದ ಬುದ್ಧಿ ನೂರು ವರುಷವಲ್ಲವೇ?

ಮುಂದಿನ ಕೆಲವು ಮಾತನ್ನು ಹೇಳುವಾಗಲಂತೂ ನನಗೆ ರೋಮಾಂಚನವಾಯಿತು. ಶಬ್ದಶಃ ಅದರ ನೆನಪಿಲ್ಲ. ಆದರೆ ಅದರ ಭಾವವಿಷ್ಟು "ಅಸ್ಪೃಶ್ಯರನ್ನು ಸ್ಪೃಶ್ಯರನ್ನಾಗಿ ಮಾಡಿರಿ. ಅಶಿಕ್ಷಿತರನ್ನು ಸುಶಿಕ್ಷಿತರನ್ನಾಗಿಸಿರಿ. ಹಸಿದವರಿಗೆ ಅನ್ನ ಇಕ್ಕಿ. ಅಂದರೆ ಮಾತ್ರ ಪರಮಾತ್ಮನ ದರ್ಶನವಾದೀತು. ಸ್ವಾತಂತ್ರ್ಯವೇ ಸ್ವರ್ಗ. ನೀವು ಯಾರ ಗುಲಾಮರೂ ಆಗಬೇಡಿರಿ. ಇದೇ ಆಗರಕರರು ಹೇಳಿದ ಶಿಕ್ಷಣವಿದೆ"

ಹೀಗೆಯೇ ಇನ್ನಿತರ ಮಹಾಪುರುಷರ ಸ್ಮಾರಕ ದಿನವನ್ನು ಆಚರಿಸಬೇಕೆಂದು ನಿಶ್ಚಯಿಸಿದ್ದೇವೆ. ಗಾಜಿನ ಮೇಲೆ ಸೂರ್ಯಕಿರಣ ಬೀಳಲು ವಜ್ರದಂತೆ ಮಿಂಚಹತ್ತುತ್ತದೆ ಅಂದಬಳಿಕ ದೊಡ್ಡ ಮನುಷ್ಯರ ಗುಣಕಥನದ ಪರಿಣಾಮ ಹುಡುಗರ ಮನಸ್ಸಿನ ಮೇಲೆ ಆಗದೆ ಹೋದೀತೇ?

ಕಸ್ಟಂ ಖಾತೆಯ ಪೆನ್ಶನರ್ ಶಾಸ್ತ್ರಿ ರಾವಸಾಹೇಬರೊಬ್ಬರು ಅಧ್ಯಕ್ಷರಾಗಿದ್ದರು. ಪಾಪ! ಆತ ಆಗರಕರರ ಒಂದು ನಿಬಂಧವನ್ನಾದರೂ ಓದಿದ್ದನೋ ಇಲ್ಲವೋ! ತಮ್ಮ ಪ್ರೀತಿಯ ಓಲ್ಡಫೋಕ್ಸ ಸಾಹೇಬರ ಕತೆಗಳನ್ನಿಷ್ಟು ಹೇಳಿದ. ಅದರಿಂದ ಮಕ್ಕಳಿಗಿಷ್ಟು ಮನೋರಂಜನವಾಯಿತು. ಎಷ್ಟಾದರೂ ಪೊನ್ನುಳ್ಳವನೆ ಕುಲೀನಂ ಅಲ್ಲವೇ?

ಇದೀಗ ಇಬ್ಬರು ಹುಡುಗಿಯರನ್ನು ಕಲಿಸಹತ್ತಿದ್ದೇನೆ. ಇವರ ಬಗ್ಗೆ ಹಿಂದಿನ ಪತ್ರದಲ್ಲಿಯೇ ಬರೆದಿರುವೆ. ಅವರಲ್ಲಿ ಒಬ್ಬಳು ಶಾಸ್ತ್ರಿಯವರ ಮಗಳು ಇನ್ನೊಬ್ಬಳು ದಾದಾಸಾಹೇಬರ ತಂಗಿ. ಇದನ್ನು ಓದಿದಾಗ ಮನಸ್ಸಿನಲ್ಲಿಯೇ ನೀನು ನಗಬಹುದು. ಆದರೆ ಶಾಸ್ತ್ರಿಯವರ ಮಗಳನ್ನು ಕಲಿಸುವುದರಿಂದ ನಮ್ಮ ಶಾಲೆಗೊಂದು ವ್ಯಾಯಾಮಶಾಲೆಯಾಗಲಿದೆ. ಇನ್ನೊಬ್ಬಳು ದಾದಾಸಾಹೇಬರ ತಂಗಿ ಬಾಲವಿಧವೆ ಸುಧಾ."

ಹುಡುಗರ ಪೇಪರು ನೋಡಿದಲ್ಲಿ ಉಂಟಾಗುವಷ್ಟು ವಿನೋದ ಇನ್ನೆಲ್ಲಿಯೂ ಸಿಗದು. ಈಗಲೇ ಪತ್ರ ಸಾಕಷ್ಟು ಉದ್ದವಾಗಿದೆ. ಆದರ ಬಗ್ಗೆ ಇನ್ನೊಮ್ಮೆ ಬರೆಯುವೆ.

ಸರದಾರ ಗೃಹ ರಮಣಿಯ ಚಿಂತನದಲ್ಲಿಯೇ ಹೆಚ್ಚು ವೇಳೆ ಕಳೆಯಬೇಡ. ನಿನಗೆ ಅಮ್ಮನ ಆಶೀರ್ವಾದ.

ನಿನ್ನವನೇ
ಸುಧಾಕರ

ಸುಧೆಯು ಪತ್ರವನ್ನೋದಿ ಸುಧಾಕರನ ಕೈಗಿತ್ತಳು. ಅದರಲ್ಲಿ ಇಂಗಿ ಹೋಗುತ್ತಿದ್ದ ಸುಧೆಯ ಅಶ್ರುಬಿಂದು ಕಂಡಿತು. "ಈ ಬಿಂದುವಿನಲ್ಲಿ ಸುಧೆಯ ಸರ್ವಹೃದಯುವಿದೆ." ಎಂದೆನಿಸಿತು. ಆ ಬಿಂದುವನ್ನು ಸ್ಪರ್ಶಿಸಲು ಆತನ ಕೈ ಮುಂದಾಯಿತು. ಅವನ ಕೈಗೆ ಏನೂ ಹತ್ತಲಿಲ್ಲ ಆದರೆ ಆ ಅಶ್ರುಬಿಂದುವು ಗುಪ್ತವಾಗಿ ತನ್ನ ಹೃದಯದಲ್ಲಿ ಹೋಗಿ ನಿಂತಿದೆಯೆಂದು ಆತ ಭಾವಿಸಿದ.

## ಪ್ರಕರಣ ೧೯.

ರಾವಸಾಹೇಬರಿಗೆ ಮನೆಕಾಯಲು ಒಬ್ಬ ನೌಕರ ಬೇಕಾಗಿದ್ದ. ಅವರ ಮನೆ ಊರಿಂದ ದೂರದಲ್ಲಿತ್ತು. ಅಲ್ಲದೆ ನೆರೆಹೊರೆಯಲ್ಲಿ ವಿಶೇಷ ಜನವಸತಿಯಿದ್ದಿಲ್ಲ. ಮೇಲಾಗಿ ಹಣವಿದ್ದವರಿಗೆ ಭಯವಿದ್ದದ್ದೇ. ವಾರುಣಿಯನ್ನು ಜೊತೆಗೆ ಕರೆದುಕೊಂಡು ಪೇಟೆಯಲ್ಲಿ ಹೊರಟರೆಂದರೆ ಹೊಲಸು ಚಿಂದಿಯುಟ್ಟ ಕಟ್ಟಿಗೆ ಮಾರುವ ಹೆಂಗಸರು ಅವಳೆಡೆಗೆ ಚಕಿತರಾಗಿ ನೋಡುತ್ತಿದ್ದರು. ಚೀಲದ ಭಾರದಿಂದ ಮೇಲಕ್ಕೆ ನೋಡಲಾಗದಿದ್ದ ಕೂಲಿಯೂ ರಾವಸಾಹೇಬರ ದರ್ಶನದ ಸಂಧಿಯನ್ನು ತಪ್ಪಿಸಿಕೊಳ್ಳುತ್ತಿದ್ದಿಲ್ಲ. ಈ ಜನರ ದೃಷ್ಟಿಯಲ್ಲಿ ತುಂಬಿದ ಮತ್ಸರ, ಎಂದಾದರೊಮ್ಮೆ ತನ್ನ ಮನೆಗೆ ಬೆಂಕಿಹಚ್ಚಲು ಹಿಂಜರಿಯಲಿಕ್ಕಿಲ್ಲೆಂಬ ಅಸ್ಪಷ್ಟ ಸಂಶಯ ರಾವಸಾಹೇಬರ ಮನಸ್ಸಿನಲ್ಲಿ ಕ್ರಮೇಣ ಬರಹತ್ತಿತು. ರಾವಸಾಹೇಬರ ಸಂಶಯ ನಿರಾಧಾರವಾಗಿತ್ತೆಂದು ಹೇಳುವ ಹಾಗೂ ಇದ್ದಿಲ್ಲ. ಹಣವಿದ್ದವನು ಸುರಕ್ಷಿತವಾಗಿರುವದು ಕಠಿಣವೇ! ಅದಕ್ಕಾಗಿಯೇ ಲಕ್ಷ್ಮಿಯು

ಗಂಟುಬಿದ್ದಷ್ಟೇ ತಡ ಶ್ರೀವಿಷ್ಣು ಕ್ಷೀರಸಾಗರದ ತಳವನ್ನಾಶ್ರಯಿಸಿದನು. ಕುಬೇರನು ಹಿಮಾಲಯದ ಉತ್ತುಂಗ ಶಿಖರವನ್ನೇರಿ ತನ್ನ ಅಲಕಾನಗರವನ್ನು ಸ್ಥಾಪಿಸಿಬಿಟ್ಟನು.

ಗಂಗಾಧರನ ಒಗ್ಗೆ ಶಿಫಾರಸು ಮಾಡುವದೆಂದರೂ ಸುಧಾಕರನಿಗೆ ಜೀವದ ಸುತ್ತು ಬಂದಂತಾಯಿತು. ಎಲ್ಲಿಯಾದರೂ ಹೆಂಡಕುಡಿದು ರಾಯರಿಗೇ ಬಯ್ಯುತ್ತಿದನೆಂದರೆ ಆತನ ಶ್ರಮವೆಲ್ಲ ನಿರರ್ಥಕವಾಗುತ್ತಿತ್ತು.

ಅವರ ಮುಂದಿನ ದೀನಚಿತ್ರ ಕಣ್ಣೆದುರು ಕಟ್ಟಿದಾಗ ಹೇಗಾದರೂ ಮಾಡಿ ಗಂಗಾಧರನಿಗೆ ಜೀವನೋಪಾಯ ಕಲ್ಪಿಸಿಕೊಡಬೇಕೆಂದು ನಿಶ್ಚಯಿಸುವ ರಾವಸಾಹೇಬರೂ ಕುಡುಕರೆಂಬುದು ಸುಧಾಕರನಿಗೆ ಗೊತ್ತೇ ಇತ್ತು. ರಾವಸಾಹೇಬರು ಅನೀತಿವಂತರಾದರೂ ಅವರ ಸುಖ ಸಂತೋಷ, ಮಾನ ಸನ್ಮಾನಗಳಿಗೆ ಚ್ಯುತಿ ಬಾರದಿರುವಾಗ ಗಂಗಾಧರನ ಅದೇ ಚಟಕ್ಕಾಗಿ ಅವನ ಕುಟುಂಬವನ್ನು ಅನ್ನಾನ್ನಗತಿಕನನ್ನಾಗಿ ಮಾಡಲು ಸುಧಾಕರನ ಮನಸ್ಸೊಪ್ಪಲಿಲ್ಲ. ಪಾಪಕ್ಕೆ ಚಿನ್ನದ ಮೆರುಗುಕೊಟ್ಟ ಮಾತ್ರಕ್ಕೆ ಅದೇನು ಪುಣ್ಯವಾಗಲಾರದು. ರಾವಸಾಹೇಬರು ಒಡೆಯ, ಗಂಗಾಧರ ಸೇವಕ. ರಾವಸಾಹೇಬರು ಕುಡಿದು ನಡುಮನೆಯಲ್ಲಿ ಮಲಗಿದರೆ ಗಂಗಾಧರನು ಅಮಲೇರಿ ಜಗುಲಿಯ ಮೇಲೆ ಬೀಳಬಹುದು

ಶಾಲೆಬಿಟ್ಟೊಡನೆಯೇ ಸುಧಾಕರ ಗಂಗಾಧರನ ಮನೆಗೆ ಹೊರಟ ಸುಮಾರು ಒಂದೂವರೆ ಮೈಲು ಹೋಗಬೇಕಾಗಿತ್ತು. ಆದರೆ ಪಚ್ಚದಿಂದ ಸಿಂಗರಿಸಿದಂತೆ ಹಚ್ಚಹಸುರಾಗಿ ತೋರುವ ಹೊಲ, ಪೃಥ್ವಿಯ ಮೇಲಿನ ಹಸಿಹುಲ್ಲನ್ನು ಆಡಿಸುವದಕ್ಕೋಸ್ಕರ ಗಿಡ್ಡತಂಗಿನ ಮರವು ತನ್ನ ಗರಿಗಳ ರೂಪದಿಂದ ಮುಂದೆ ಮಾಡಿದ ಕೈ, ಗುಂಜಾರವವಂತೆ ಭಾಸಿಸುವ ಹೊಲದಲ್ಲಿಯ ಹೆಂಗಸರ ಹಾಡು, ಪಕ್ಷಿಗಳ ವಿವಿಧ ಹಾಗೂ ಸ್ವಚ್ಛಂದ ಸ್ವರ, ಮಳೆ ಸುರಿಯುತ್ತಿರುವಾಗ ಮುನಿದವನಂತೆ ಕಂಡು ಈವಾಗ ಸೌಮ್ಯ ಮುದ್ರೆಯಿಂದ ನೋಡುತ್ತಿರುವ ಅಂಬರ–ಇವೆಲ್ಲ ಸಂಗತಿಗಳು

ಚಿತ್ತಾಕರ್ಷಕವಾಗಿದ್ದುದರಿಂದ ತಾನು ಗಂಗಾಧರನ ಕೇರಿಯ ಬಳಿ ಅತ್ಯಲ್ಪ ಅವಧಿಯಲ್ಲಿಯೇ ಬಂದಂತೆ ಸುಧಾಕರನಿಗೆ ಅನಿಸಿತು

ಗಂಗಾಧರನ ಮನೆಯಿದ್ದ ಕೇರಿಯೆಂದರೆ ಮೂರ್ತಿವಂತ ಬಡತ ನದ ಹುತ್ತಳಿಯೇ ಆಗಿತ್ತು. "ಕಲ್ಲು ಹೃದಯದಂತೆ ಕಲ್ಲ ಮನೆಯು ಹಕ್ಕ ಸಹ ಶ್ರೀಮಂತರದೇ ಎಂದು ಸಿದ್ಧಪಡಿಸುವವಕ್ಕಾಗಿಯೇ ಏನೋ ಆ ಕೂಲಿಕಂಬಳಿಯವರ ಮನೆಗಳೆಲ್ಲ ಮಣ್ಣು ಹಾಗೂ ಹುಲ್ಲಿನ ದಿದ್ದವು. ಒಂದು ಮನೆಯ ನೆಲಕ್ಕೆ ತೇವು ಬಂದುಬಿಟ್ಟಿತ್ತು. ಇನ್ನೊಂದ ರ ಮಗ್ಗಲು ಗೋಡೆ ಬಿದ್ದಿತ್ತು. ಮತ್ತೊಂದು ಮನೆಯಲ್ಲಿ ಕತ್ತಲೆಯಾ ಳುತ್ತಿತ್ತು, ಒಂದೆಡೆ ಹುಡುಗರು ಬರಿಮೈಯಿಂದ ಆಡುತ್ತಿದ್ದರೆ, ಇನ್ನೊಂ ದೆಡೆ ಕಸಬರಿಗೆಗೋಸ್ಕರ ಒಬ್ಬ ಹಸಿಮುದಲಿನಕಡ್ಡಿ ತೆಗೆಯುತ್ತಿದ್ದ. ಮ ಣ್ಣಿನ ಮಡಕೆಯೇ ನೀರು ಕಾಸುವ ಹಂಡೆ'' ಹರಕುಚಾಪೆಯೇ ರತ್ನಗಂ ಬಳಿ. ದುಪ್ಪಟ್ಟಿಯೇ ಉಣ್ಣೆಯಶಾಲು. ಚಿಕ್ಕ ಚಿಮಣಿಯೇ ಅವರ ಗ್ಯಾಸ ಟೊಂಕದಲ್ಲಿಯ ಗಡುತರ ಉಡದಾರದ ಆಧಾರದಿಂದ ಬಿಗಿದ ಲಂಗೋ ಟಿಯೇ ಅವರ ಉಡುಪು, ಹೆಂಗಸರ ಕೈಯಲ್ಲಿ ಹಿತ್ತಾಳಿಯ ಬಳೆ. ವಾ ಗಿಗೆ ಒಂದೆರಡು ರೂಪಾಯಿಯೂ ಬೀಳದ ಮೂಗಬಟ್ಟು ಈ ಜನರು ಬಿಸಿಲಲ್ಲಿ ಕಾದು, ಮಳೆಯಲ್ಲಿ ತೊಯ್ದು, ಹೊಲವಲ್ಲಿ ಕೆಲಸಮಾಡುವದ ರಿಂದಲೇ ದಾದಾಸಾಹೇಬರಂಥವರು ಆರಾಮುಖುರ್ಚಿಯ ಮೇಲೆ ಬಿದ್ದು ಪತ್ರಿಕೆಯನ್ನೋದಲು ಅನುವಾಗುತ್ತಿದೆ ಮಧುಕರನಿಗೆ ಸಿಗರೇಟು ಸೇ ದುತ್ತ ಕಾವ್ಯರಚಿಸಲು ಬರುತ್ತಿದೆ. ವಾರುಣಿಯ ಕೈಯೊಳಗಿನ ಆಭರಣ, ದಾದಾಸಾಹೇಬರ ಎರಡಂತಸ್ತಿನ ಮನೆ—ಮಧುಕರನ ಎರಡನೇ ವ ರ್ಗದ ರೈಲು ಪ್ರವಾಸ ಇವೆಲ್ಲ ನಿಂತುದು ಯಾತರ ಮೇಲೆ? ಈ ಬಡವರ ಜೀವನದ ಮೇಲೆ ದುಡಿಯದವರಿಗೆ ಉದ್ಯಾನ, ದುಡಿದವರಿಗೆ ಸ್ಮಶಾನ. ಹೀಗೇಕೆ ಆಗಬೇಕು? ಅಜ್ಞಾನ .... ಜನರ ಅಜ್ಞಾನವೇ ದಾರಿದ್ರ್ಯಕ್ಕೆ ಕಾರಣ.

ನನ್ನ ಶ್ರಮದಿಂದ ಈ ಬಡಹುಡುಗರು ಸುಶಿಕ್ಷಿತರಾಗಬಹುದು ಒಂದೇ ತಲೆಮಾರಿನಲ್ಲಿ ಹುಲ್ಲುಗುಡಿಸಲು ಹೋಗಿ ಮಂಗಳೂರ ಹಂಚಿ

ಸ ಮನೆಗಳು ಸಾಲಾಗಿ ನಿಲ್ಲಬಹುದು. ಗಂಜಿಗೂ ಗತಿಯಿಲ್ಲದ ಜನರ ಎಲೆಯ ಮೇಲೆ ಹೋಳಿಗೆ ತುಪ್ಪ......ಬೀಳದಿದ್ದರೂ ಚಟ್ನಿ ಭಕ್ಕರಿಯಾದರೂ ಬೀಳಬಹುದು. ಇದೇ ವಿಚಾರದಿಂದ ಮುಂದುವರಿದ ಗಂಗಾಧರನ ಮನೆ ಕಣ್ಣಿಗೆ ಬಿತ್ತು.

ಗಂಗಾಧರನು ಮನೆಯಲ್ಲಿ ರೊಕ್ಕಕ್ಕಾಗಿ ಕಾದಾಟ ನಡೆಸಿದ್ದ. ಆತನಿಗೆ ಗಡಂಗಕ್ಕೆ ಹೋಗಲು ಹಣಬೇಕಾಗಿದ್ದಿತು. ಸುಧಾಕರನನ್ನು ಕಂಡೊಡನೆಯೇ ಯಮುಳ ಕೈಯ್ಯಲ್ಲಿದ್ದ ರೊಕ್ಕವನ್ನು ಕಸಿದುಕೊಂಡು ಗಂಗಾಧರನು ಓಡಿಯೇ ಬಿಟ್ಟ. ಆತನನ್ನು ಹಿಡಿದು ಬುದ್ಧಿ ಹೇಳಬೇಕೆಂದು ಸುಧಾಕರನಿಗೆ ಅನಿಸಿತು. ಆದರೆ ಅವೆಲ್ಲ ನಿಷ್ಪ್ರಯೋಜಕವಾಧೀತೆಂದು ಅನಿಸಿದ್ದರಿಂದ ಸುಮ್ಮನಾಗಬೇಕಾಯಿತು.

ಸುಧಾಕರನಿಗೆ ಕೂಡ್ರಲು ಯಮಿಯು ಜಗುಲಿಯ ಮೇಲೆ ಹರಕು ಚಾಪೆ ಹಾಸಿದಳು. ಆಕೆ ಕಣ್ಣೊರಸುತ್ತ ಹೇಳಿದ ಸಂಗತಿಯನ್ನೆಲ್ಲ ಕೇಳಿಕೊಂಡನು. ಗಂಗಾಧರನಿಗೆ ಮನೆ ಹೊದಿಸುವದರಿಂದ ಬೇಸಿಗೆಯಲ್ಲಿ ಸಿಕ್ಕ ರೊಕ್ಕ, ಅದನ್ನೆಲ್ಲ ಹಾಳುಮಾಡಿಕೊಂಡ ಬಗೆ, ತನ್ನ ಬಗ್ಗೆ ಪರ್ಯಾಯವಾಗಿ ಆಡಿಕೊಳ್ಳುವ ಆತನ ರೀತಿ ಇವನ್ನೆಲ್ಲ ಕೇಳಿ ಆತನಿಗೆ ಅತೀವ ವ್ಯಥೆಯಾಯಿತು. ಆದರೂ ರಾವಸಾಹೇಬರ ಮನೆಯ ಕೆಲಸಕ್ಕೆ ಗಂಡನನ್ನು ಒಪ್ಪಿಸಲು ಹೇಳಿ ಅದರಲ್ಲಿ ತನ್ನ ಅಂಗವಿದೆಯೆಂದು ತಿಳಿಸದಿರಲು ಸೂಚಿಸಿದನು.

ಎಲ್ಲಿಗೋ ಹೋಗಿದ್ದ ಯಮಿಯ ಮಾವ ಬಂದ. ಅವನ ವಯಸ್ಸು ಸುಮಾರು ಅರವತ್ತು ಇತ್ತು. ಒಂದು ಲಂಗೋಟಿಯ ಹೊರತು ಇನ್ನಾವ ವಸ್ತ್ರವೂ ಆತನ ಮೈಮೇಲಿರಲಿಲ್ಲ. “ಇಂದಿಗೆ ಐವತ್ತುವರ್ಷ ಕಾಯಕಷ್ಟ ಮಾಡಿ ಬೆವರಿಳಿಸಿದ. ಆದರೂ ಬಟ್ಟೆಗೂ ಗತಿಯಿಲ್ಲ, ವಿಲಾಸದ ಒಡವೆಗಳಂತೂ ದೂರ ಉಳಿಯಿತು. ಅಗತ್ಯವುಳ್ಳ ಪದಾರ್ಥಗಳು ದೊರೆವುದಕ್ಕೂ ಆತ ಯಾತನೆ ಪಡಬೇಕು. ರಾವಸಾಹೇಬನಂತೆ ಅನೀತಿವಂತನಾಗಲೀ, ಆಲಸಿಯಾಗಲೀ ಆಗಿರಲಾರ. ಹಾಗಾದರೆ ಆತನು ಮಾಡಿದ ಪಾಪ ವೆಂತಹದು” ಎಂದು ಸುಧಾಕರನು ಯೋಚಿಸಹತ್ತಿದ.

ಮುದುಕನು ತನ್ನ ಕತೆಯನ್ನೆಲ್ಲ ತೋಡಿಕೊಂಡ. ''ಹತ್ತು ವರ್ಷದ ಹಿಂದೆ ತನ್ನ ಬೆಳೆಯುಳ್ಳ ಹೊಲದ ಮೂಲಕ ಇದ್ದ ಸುಸ್ಥಿತಿ, ಗಂಗಾಧರನು ಕಾಯಿಲೆಯಿಂದ ಮಲಗಿದಾಗ ಕರೆಯಿಸಲ್ಪಟ್ಟ ವೈದ್ಯ, ತಾನು ಅಮಲಿನಲ್ಲಿರುವಾಗ ವಂಚಿಸಿ ಹೊಲ ಎತ್ತಿಹಾಕಿದುದರಿಂದ ಉಂಟಾದ ಇಂದಿನ ದೈನ್ಯಜೀವನ ಇವನ್ನೆಲ್ಲ ವಿವರವಾಗಿ ವರ್ಣಿಸುತ್ತಿರುವಾಗ ಆ ಮುದುಕನ ಕಣ್ಣೊಳಗಿಂದ ಗಳಗಳನೆ ನೀರು ಸುರಿಯಹತ್ತಿತು.

ಅದೇ ಹೊತ್ತಿಗೆ ಜಗನ್ನಾಧನೂ ಬಂದ. ಆತನ ಕೈಯ್ಯಲ್ಲಿ ಇಸ್ಪೀಟಿನ ದಸ್ತು ಇತ್ತು. ಸುಧಾಕರನನ್ನು ಕಂಡು ಅದನ್ನು ಅಡಗಿಸಿಡಲು ಮಾಡಿದ ಯತ್ನವೆಲ್ಲ ನಿರರ್ಥಕವಾಯಿತು. ಸುಧಾಕರನು ಇಸ್ಪೀಟಿನ ದಸ್ತನ್ನು ಗಂಗಾಧರನ ಕಡೆಯಿಂದ ತೆಗೆದುಕೊಂಡ. ಇಸ್ಪೀಟು ನೋಡಿದೊಡನೆಯೇ ಜಗನ್ನಾಧನ ನಡತೆ ಕಣ್ಣೆದುರು ಕಟ್ಟಿತು.

ಏಳನೇಯತ್ತೆಯಲ್ಲಿ ನಪಾಸು ಆದುದರಿಂದ ಜಗನ್ನಾಧ ಮನೆಯಲ್ಲಿಯೇ ಇದ್ದ. ಆತನ ಬಸುರಿ ಸಹೋದರಿ ಮುಸುರಿ ತಿಕ್ಕುವ ಕೆಲಸಕ್ಕೆ ಹಾಗೂ ಇತರರು ಯಾವುದಾದರೂ ಕೆಲಸಕ್ಕೆ ಹೋಗುತ್ತಿದ್ದುದರಿಂದ ಜಗನ್ನಾಧನಿಗೆ ವೇಳೆಕಳೆಯುವದು ಕಷ್ಟವಾಯಿತು. ಇಂತಹ ನಿಸ್ಸಹಾಯಸ್ಥಿತಿಯಲ್ಲಿರುವಾಗ ಇಸ್ಪೀಟಿನ ರಾಜಾರಾಣಿಯರು ಜಗನ್ನಾಧನಿಗೆ ನೆರವಾದರು. ಫೀಯ ನಲುವಾಗಿಯೇ ಜಗನ್ನಾಧನು ಸಾಲೆಗೆ ಬರುವದಿಲ್ಲವೆಂದು ಗೊತ್ತಾದೊಡನೆ "ನಾನು ಫೀ ವ್ಯವಸ್ಥೆ ಮಾಡುತ್ತೇನೆ. ನೀನು ಸಾಲೆಗೆ ಬಾ" ಎಂದು ಸುಧಾಕರನು ಆಶ್ವಾಸನವನ್ನಿತ್ತ, ಮತ್ತೊಮ್ಮೆ ಗಂಗಾಧರನಿಗೆ ರಾವಸಾಹೇಬರ ನೌಕರಿಯ ವಿಷಯ ನೆನಪು ಮಾಡಲು ಹೇಳಿ ಮನೆಯ ದಾರಿಹಿಡಿದ.

ಈಗ ಮೊದಲು ಬಂದ ದಾರಿಯನ್ನು ಬಿಟ್ಟು ಸಾಗರದಂಡೆಯಿಂದ ಮಳಲಮಾರ್ಗವಾಗಿ ಮುಂದೆ ಸಾಗಲು ನಿರ್ಧರಿಸಿದ. ಸಮುದ್ರದ ತಂಪು ಹವೆಯಿಂದ ವಿಚಾರದಿಂದ ಕಾದ ತಲೆಯು ಶಾಂತವಾಯಿತು. ಸಮುದ್ರವನ್ನು ಸಮೀಪಿಸಿದಂತೆ ಸಾವಿರಾರು ಮಗ್ಗ ನಡೆಯುತ್ತಿರುವ ಗಿರಣಿಯ ಸಪ್ಪ

ಜಡಂತೆ ಸಪ್ಪಳ ಕೇಳಿಸುತ್ತಿತ್ತು. ನೀರಿನ ಕಣಗಳು ವಾಯು ಲಹರಿಯೊಡನೆ ನರ್ತಿಸುತ್ತಿದ್ದವು. ದೂರದಿಂದ ತೋರುವ ಧಡದಮೇಲಿನ ನೊರೆಯು ಮಜ್ಜಿಗೆ ಕಡೆಯಲು ಮೇಲಕ್ಕೆ ಬರುವ ಬೆಣ್ಣೆಯಂತೆ ಭಾಸಿಸುತ್ತಿತ್ತು. ಸುಧಾಕರನು ಎದುರಿಗೆ ನೋಡಿದ. ಅದೊಂದು ನೀರಿನ ಬ್ರಹ್ಮಾಂಡವಾಗಿತ್ತು. ತಾಯಿಯ ಪ್ರೇಮದಂತೆ ಅಥವಾ ಕವಿಯ ಕಲ್ಪನೆಯಂತೆ ಅದರ ಕೊನೆಯನ್ನರಿಯಲು ಅಶಕ್ಯವಾಗಿತ್ತು. ಬಹಳ ದಿನದ ಮೇಲೆ ಪ್ರಿಯನ ಭೆಟ್ಟಿಯಾಗಲು ಹೃದಯದಲ್ಲಿ ಆನಂದ ಲಹರಿಯು ಉಕ್ಕೇರುವಂತೆ ಸಮುದ್ರದ ಮೇಲಿನ ವಿಶಾಲ ಅಲೆಗಳು ಉಕ್ಕೇರಿ ಬರುತ್ತಿದ್ದವು. ಇವನ್ನು ಒಬ್ಬ ಹುಡುಗ ನೋಡಿದರೆ, ಸೃಷ್ಟಿಯು ಸಾಗರದ ಬೆನ್ನಮೇಲೆ ಗೆರೆಯು ಹಾಕಿ ಸರಿ ಬರದಿರಲು ಅವನ್ನು ಒರಸಿ ಸರಿಗೆರೆ ತೆಗೆಯುವ ಯತ್ನದಲ್ಲಿದೆಯೆಂದು ಕಂಡು ಬರುತ್ತಿತ್ತು. ಹರೆಯದವನಿಗೆ ಜಲದೇವಿಯು ಆಕಾಶಬಣ್ಣದ ವಸ್ತ್ರವನ್ನುಟ್ಟಿದ್ದು ಗಾಳಿಯಿಂದ ಅದಕ್ಕೆ ನಿರಿಗೆಗಳುಂಟಾಗುತ್ತಿವೆಯೆಂದು ಕಲ್ಪನೆಯಾಗುತ್ತಿತ್ತು. ವೃದ್ಧರಿಗೆ ಕ್ಷಣಕ್ಷಣಕ್ಕೆ ಜೀವಿಗಳಿಗೆ ಜನ್ಮ ಕೊಡುವ ಮತ್ತು ಅಷ್ಟೇ ಪ್ರಾಣಿಗಳನ್ನು ವಿಲಯಗೊಳಿಸುವ ಪ್ರಪಂಚದ ನೆನಪು ಬರಬಹುದಾಗಿತ್ತು.

ಸುಧಾಕರನು ತೆರೆಗಳ ಬೆನ್ನಟ್ಟುವ ಆಟವನ್ನು ಎಷ್ಟೋ ಹೊತ್ತಿನವರೆಗೆ ಅನಿಮಿಷ ನೇತ್ರಗಳಿಂದ ನೋಡಿದ. ನೋಡಿದಷ್ಟೂ ತೃಪ್ತಿಯೆನಿಸದು. ಸಾಗರ ಲತೆಗೆ ಸಾವಿರಾರು ಹೂಗಳು ಅರಳಿ ಮರುಕ್ಷಣದಲ್ಲಿಯೇ ಉದುರಿಬೀಳುತ್ತಿದ್ದವು. ತಿರುತಿರುಗಿ ಏಳುವ ತೆರೆಗಳು ಮೊದಲು ಬಿದ್ದುಹೋದವುಗಳೇ ಇದ್ದರ ತೆರೆಗಳ ಪುನರ್ಜನ್ಮವಿರಬೇಕೆಂಬ ವಿಚಿತ್ರ ಕಲ್ಪನೆ ಬಂದಿತು. ಸುಧಾಕರನು ಹೀಗೆಯೇ ವಿಚಾರದಲ್ಲಿ ಮುಳುಗಿರುವಾಗ ತಾಯಿ ಮತ್ತು ಸುಧಾ ಮುಂದೆ ನಡೆದು ಹೋಗುತ್ತಿರುವಂತೆ ಕಂಡಿತು. ಸುಧಾಕರನು ವೇಗವಾಗಿ ನಡೆದು ಅವರನ್ನು ಕೂಡಿಕೊಂಡ.

"ಇಂದು ಸೋಮವಾರವಿತ್ತು. ಇಲ್ಲಿಯೇ ಶಿವ ಮಂದಿರವಿದೆಯೆಂದು ಸುಧೆ ಹೇಳಿದಳು. ದೇವರ ದರ್ಶನಕ್ಕಾಗಿ ಬಂದಿದ್ದ" ಎಂದು ಜಾನಕಿಯಮ್ಮನವರೆಂದರು.

"ಇಲ್ಲಿ ನಾನೆಷ್ಟೋ ಸಲ ಬಂದಿದ್ದೇನಾದರೂ ದೇವಸ್ಥಾನದ ಸ್ಥಳವು ಹತ್ತಲಿಲ್ಲವಲ್ಲ!"

"ಈಗಿನ ಹುಡುಗರಿಗೆ ದೇವರಾದರೂ ಕಾಣಿಸುತ್ತಾನೆಲ್ಲಿ?"

"ಅವರಿಗೆ ಕಲ್ಲಿನಲ್ಲಿ ಕಾಣಿಸದಿದ್ದರೂ ಮನುಷ್ಯರಲ್ಲಿ ಕಾಣಿಸುತ್ತಾನೆ."

ಸುಧಾಕರನ ಈ ಮಾತು ಕೇಳಿ ಸುಧೆಗೆ ಮುಗುಳುನಗೆ ಬಂದಿತು. ಅವಳು ಗಾಳಿಯಿಂದ ಬರುಬುರನೆ ಹಾರುತ್ತಿರುವ ತನ್ನ ಕೂದಲನ್ನು ಸರಿಪಡಿಸಿಕೊಳ್ಳುತ್ತಿದ್ದಳು. ಸುಧಾಕರನು ಉಸುಕಿನಲ್ಲಿ ಕೂತು ಅಮ್ಮನಿಗೆ ಗಂಗಾಧರನ ಸುದ್ದಿಯನ್ನೆಲ್ಲ ಹೇಳಹತ್ತಿದನು. ಕೊನೆಗೆ ಆವೇಶದಿಂದ ನುಡಿದ. "ಇಂತಹ ಗಂಡನಿಂದೇನು ಪ್ರಯೋಜನ? ಕುಂಕುಮಕ್ಕೊಂದು ಆಧಾರ. ಕೊರಳಿಗೊಂದು ಭಾರ."

"ಮಗೂ, ಹೀಗೆಲ್ಲ ಅನ್ನಬಾರದು. ಊರಿಗೊಂದು ನೀರಿನ ಹೊಂಡ. ಹೆಂಗಸಿಗೊಂದು ಗಂಡ" ಎಂದು ಗಾದೆಯೇ ಇದೆಯಲ್ಲ.

ತಾನು ಹೇಳಬಾರದ್ದನ್ನು ಹೇಳಿದೆನೆಂದು ಅನಿಸಿ ಸುಧೆಯ ಕಡೆಗೆ ನೋಡಿದನು. ಆಕೆ ರೇವೆಯಲ್ಲಿ ಏನನ್ನೋ ಬರೆಯುತ್ತ ಕುಳಿತಿದ್ದಳು. ಆಗ ಜಾನಕಿಯಮ್ಮ "ದೇವರ ದರ್ಶನ ತೆಗೆದುಕೊಂಡು ಬೇಗನೇ ಹೋಗೋಣ. ತಡವಾದರೆ ಅತ್ತಿಗೆ ನಿನ್ನನ್ನು ಹರಿದು ತಿಂದು ಬಿಟ್ಟಾರು" ಎಂದಳು.

ಎಲ್ಲರೂ ಎದ್ದರು. ಸುಧಾಕರನು ಮಾತ್ರ ಸುಧೆಯು ಏನು ಬರೆದಿದ್ದಾಳೆಂಬುದನ್ನು ನೋಡದೆ ಬಿಡಲಿಲ್ಲ. ರೇವೆಯಲ್ಲಿ ಸ್ಪಷ್ಟ ಸುಂದರ ಅಕ್ಷರಗಳು ಕಾಣುತ್ತಿದ್ದವು. "ಸುಧಾಕರ"



# ಪ್ರಕರಣ. ೨೦.

ಸೋಮವಾರ ರಾತ್ರೆ ಊಟವಾದ ಬಳಿಕ ಶಿವಲೀಲಾಮೃತದ ಹನ್ನೊಂದನೆಯ ಅಧ್ಯಾಯವನ್ನು ಅಮ್ಮನಿಗೆ ಸುಧಾಕರನು ಓದಿ ಹೇಳುತ್ತಿದ್ದ. ವಾಡಿಕೆಯಂತೆ ಓದು ಮುಗಿಸಿ ಪುಸ್ತಕವನ್ನು ಬದಿಗಿರಿಸಿ ತಾಯ ತೊಡೆಯ ಮೇಲೆ ತಲೆಯಿಟ್ಟ. ಭೂಮಾತೆಯು ಪರ್ವತರೂಪಿ ಹಸ್ತದ ಸ್ಪರ್ಶವಾಗಲು ಮೋಡಗಳ ಭಾರವಾಗಿರುವ ಹೃದಯ ಹಗುರಾಗುವಂತೆ ಅಮ್ಮನ ಪ್ರೇಮಳ ಹಸ್ತವು ಬೆನ್ನಮೇಲೆ ಆಡಹತ್ತಿದೊಡನೆ ಸುಧಾಕರನ ಚಿಂತಾಗ್ರಸ್ತ ಮನಸ್ಸಿಗೆ ತುಸು ನೆಮ್ಮದಿಯೆನಿಸಹತ್ತಿತು. ತಾರೆಗಳಿಂದ ಕೂಡಿದ ಗಗನದ ಹಂದರವುಳ್ಳ ಸೃಷ್ಟಿಯ ಭವ್ಯ ಮಂದಿರಕ್ಕಿಂತ ಗಿಡದಲ್ಲಿಯ ಗೂಡೇ ಹಕ್ಕಿಗೆ ಹರುಷದಾಯಕವಾಗಿರುವಂತೆ ಸುಧಾಕರನಿಗೆ ಸಮಾಜಕ್ಕಿಂತ ತಾಯಬಳಿಯಲ್ಲಿಯೇ ಅಧಿಕ ಸುಖವೆನಿಸುತ್ತಿತ್ತು.

ಸುಧಾಕರನಿಗೆ ತಾಯಿಯ ಮೇಲಿನ ಪ್ರೀತಿ ಅಪಾರವಾಗಿತ್ತು ಸಂದರ್ಭ ಸಿಕ್ಕಾಗೆಲ್ಲ ಬಾಯಿಂದ ತಾಯಿಯ ಮಮತೆಯನ್ನು ತೋರಿಸಿಕೊಳ್ಳುವ ಮಾತೇ ಹೊರಬೀಳುತ್ತಿತ್ತು. ' ಜಗತ್ತಿಗೆ ಕಾಣುವ ಪಂಚಮುಖ ಪರಮೇಶ್ವರ ತಾಯಿಯ ಪಂಚ ಬೆರಳಿನಲ್ಲಿರುತ್ತಾನೆಂದು ಒಮ್ಮೆಯೆಂದರೆ ತಾಯಿಯಿದ್ದ ಜನರು ಕಾಶಿಗೇಕೆ ಹೋಗುತ್ತಾರೋ ' ಎಂದು ಇನ್ನೊಮ್ಮೆ ನುಡಿಯುವ ' ದೇವ ದಾನವರು ಹುಚ್ಚರಾದವರಿಂದಲೇ ಅಮೃತ ಪಡೆಯುವದಕ್ಕಾಗಿ ಸಮುದ್ರಮಂಥನ ಮಾಡಿದರು ಅವರು ಇಷ್ಟೆಲ್ಲ ಕಷ್ಟಪಡುವದಕ್ಕಿಂತ ಅಮ್ಮನ ಆನಂದಾಶ್ರುವನ್ನು ಪಡೆದಿದ್ದರೆ ಸಾಕಾಗಿತ್ತೆ'ಂದು ಮಗದೊಮ್ಮೆ ನುಡಿಯುವ.

ಈಗಲೂ ತಾಯಬಳಿಯಲ್ಲಿ ಕುಳಿತು " ಅಮ್ಮಾ, ಇಷ್ಟೊಂದು ಮಮತೆ ಮಾಡಲು ನಿನಗಾರು ಕಲಿಸಿದರಮ್ಮಾ?" ಎಂದ.

" ಆಕಾಶಕ್ಕೆ ಮಳೆ ಸುರಿಸಲಿಕ್ಕೆ ಕಲಿಸಿದವನೇ ನನಗೆ ಇದನ್ನು ಕಲಿಸಿದನು " "ಛೀ, ಎಂದಿಗೂ ಇಲ್ಲ. ಮಳೆ ಎಲ್ಲಕಡೆಯಲ್ಲಿ ಸರಿಯಾಗಿ

ಬೀಳುವದಿಲ್ಲ. ಒಂಸೆಡೆಯಲ್ಲಿ ಮುಸಲಧಾರೆಯಾಗಿ ಮಳೆ ಸುರಿವರೆ ಇನ್ನೊಂದೆಡೆ ಕಣ್ಣಿಗೆ ಹಚ್ಚಲಿಕ್ಕೂ ನೀರು ಸಿಗದು.

''ಹಾಗೆ ಸರಿಯಾಗಿ ದೃಷ್ಟಾಂತ ಕೊಡಲು ನಾನೇನು ನಿನ್ನಂತೆ ಪ್ರೊಫೆಸರಳಾಗಿಲ್ಲ. ಕೋಳಿಯಾದರೂ ತನ್ನ ಮರಿಗಳಿಗಾಗಿ ಜೀವನವನ್ನು ಕಷ್ಟಕ್ಕೀಡುಮಾಡುವದಿಲ್ಲವೇ?"

''ಕೋಳಿಯ ಮಮತೆ ಮತ್ತು ನಿನ್ನ ಮಮತೆಯಲ್ಲಿ ಅದೆಷ್ಟು ಅಂತರವಿರುವದಮ್ಮಾ! ಮರಿಯು ದೊಡ್ಡದಾಗಲು ಪಕ್ಷಿಗಳ ಪ್ರೇಮ ಕೊನೆಗಾಣುತ್ತಿದೆ ಆದರೆ ನನ್ನ ಸಲುವಾಗಿ ನೀನು ವಾಲಾವಲಿಯ ಮನೆಯನ್ನೂ ಬಿಟ್ಟು ಬಂದಿಯಲ್ಲವೇ?"

" ಹೂಂ, ಅದರಲ್ಲೇನಿದೆ? ಬಾವಿಯಿದ್ದಲ್ಲಿಗೆ ತೃಷಿತನು ಓಡಿಯೇ ಓಡುತ್ತಾನೆ. ಇಂತಹ ನಡೆವಾಡುವ–ಮಾತಾಡುವ ಮನೆಯನ್ನು ಬಿಟ್ಟು ಆ ಮಣ್ಣಿನ ಮನೆಯನ್ನು ಅಂಟಿಕೊಂಡಿರಲು ನನಗೇನು ಹುಚ್ಚು ಹಿಡಿದಿಲ್ಲ."

ತಾಯಿ ಮಗನ ಮುಖದ ಮೇಲೆ ಮುದ್ದಿನಿಂದ ಕೈಯ್ಯಾಡಿಸಿ ಸ್ನಿಗ್ಧ ದೃಷ್ಟಿಯಿಂದ ನೋಡಹತ್ತಿದಳು. ಹದಿನಾಲ್ಕು ವರ್ಷ ವನವಾಸ ಮುಗಿಸಿ ಅಯೋಧ್ಯೆಗೆ ತಿರುಗಿ ಬರುತ್ತಿರುವ ಪ್ರಭು ರಾಮಚಂದ್ರನ ಕಡೆ ನೋಡುವ ಕೌಸಲ್ಯೆಯ ದೃಷ್ಟಿಯೇ ಜಾನಕಿಯಮ್ಮನ ಕಣ್ಣಿನಲ್ಲಿ ಪುನರ್ಜನ್ಮವೆತ್ತಿಬಂದಿತ್ತೋ ಏನೋ, ಯಾರು ಬಲ್ಲ? ಪೂರ್ವಜರು ಕಟ್ಟಿಸಿಟ್ಟ ಮನೆಯಲ್ಲಿ ದೀಪಹಚ್ಚುತ್ತ ಕುಳಿತುಕೊಳ್ಳುವುದಕ್ಕಿಂತ ಜಗತ್ತಿನಲ್ಲಿ ಹೆಸರು ಬರುವಂತೆ ಮಾಡುವದಕ್ಕಾಗಿ ಸುಧಾಕರನು ಪ್ರಯತ್ನ ಪಡುತ್ತಿದ್ದಾನೆಂದು ಕಂಡು ಬಂದದ್ದರಿಂದಲೇ ಜಾನಕಿಯಮ್ಮ ಹಿಂದೆ ಮುಂದೆ ನೋಡದೆ ಸುಧಾಕರನ ಜೊತೆಗೆ ಜಯಗಾಂವಕ್ಕೆ ಬಂದಿದ್ದಳು.

ಸುಧಾಕರನು ಹಸು ಮಗುವಿನಂತೆ ದೀಪದೆಡೆಗೆ ನೋಡುತ್ತ ಮಲಗಿದ್ದ. " ಅಮ್ಮಾ, ನೀನು ಏನೇ ಹೇಳು. ನಿನ್ನಂತಹ ತಾಯಿಯನ್ನು ಪಡೆಯಲು ಹಿಂದಿನ ಪುಣ್ಯವೇ ಬೇಕು."

"ಹಿಂದಿನ ಜನ್ಮದಲ್ಲಿ ಪುಣ್ಯ ಮಾಡಿರಬೇಕೆಂಬುದೊಂದು ಸುಲಭ ಉಪಾಯವಾಗಿದೆ ನಿಮಗೆ. ಈ ಜನ್ಮದಲ್ಲಿ ಪುಣ್ಯಮಾಡುವದು ಬೇಡವೇ?"

''ಮುಂದಿನ ಜನ್ಮದಲ್ಲಿಯೂ ನಿನ್ನಂತಹ ತಾಯಿಯನ್ನು ಪಡೆಯಲು ಈ ಜನ್ಮದಲ್ಲಿಯೂ ಪುಣ್ಯಮಾಡಬೇಕು."

"ಹೆಂಡತಿ ಬರುವತನಕ ಎಲ್ಲ ಮಕ್ಕಳಿಗೂ ಹೀಗೇ ಅನಿಸುತ್ತಿದೆ."

''ಅಮ್ಮಾ, ನನ್ನ ಬಗ್ಗೂ ನಿನಗೆ ಸಂದೇಹವೇ?"

ಇಲ್ಲವಪ್ಪಾ, ಹೆಣ್ಣಿನ ಜನ್ಮ ಹಾಳು ಎನ್ನುತ್ತಾರೆ. ಜನ್ಮ ಜನ್ಮಾಂತರಕ್ಕೂ ನಿನ್ನಂತಹ ಮಗನು ಲಭಿಸುವದಾದರೆ ಹೆಣ್ಣು ಜನ್ಮವೇ ಇರಲಪ್ಪಾ.''

" ಅಮ್ಮಾ, ಇವೆಲ್ಲ ದೇವರಿಚ್ಛೆ. ನಾವು ಪುಣ್ಯ ಮಾಡಿದ್ದಿದ್ದರೆ ಆತ ಕೇಳುವ. ನೀನಂತೂ ಪುಣ್ಯ ಮಾಡಿರುವೆ ಆದರೆ ನಾನೋ ... "

ಇನ್ನೊಬ್ಬರ ಒಳಿತನ್ನೇ ನೀನೂ ಸಾಧಿಸುತ್ತಲಿರುವೆಯಷ್ಟೇ?"

"ಎಲ್ಲಿಯ ಒಳಿತವ್ವಾ? ನೀರಲ್ಲಿ ಮುಳುಗುವವನಿಗೆ ತುಸು ತಡೆ, ಈಸುಗಾಯಿ ತರುವೆನೆಂದು ಹೇಳಿದರೆ ಸರಿಯೇ? ಈಗ ಸುಧೆಯನ್ನೇ ನೋಡು."

" ಅಹುದು, ಮಗೂ. ಆ ಅನಾಥ ಹುಡುಗಿಗೆ ಯಾವುದಾದರೊಂದು ದಾರಿತೋರಿಸಬೇಕು ಅತ್ತ ಅತ್ತೆಯ ಕಾಟ, ಇತ್ತ ಬಂದಲ್ಲಿ ಅತ್ತಿಗೆಯ ಕಾಟ. ಇವನ್ನೆಲ್ಲ ಆಕೆ ಹೇಗೆ ತಾಳಬೇಕು?"

"ಅಮ್ಮಾ, ಇಷ್ಟರಿಂದೇ ಮುಗಿಯಲಿಲ್ಲ. ದಾದಾಸಾಹೇಬರು ಆಕೆಯ ಅಣ್ಣ. ಅವರಿಗೆ ವೃತ್ತಪತ್ರಿಕೆಯ ಸುದ್ದಿಯ ಬಗ್ಗೆ ಹೆಚ್ಚು ಉತ್ಸುಕತೆಯೇ ಹೊರತು ತಂಗಿಗೆ ಜ್ವರಬಂದಿದ್ದರೂ ಅವಳ ಉಸಾಬರಿಗೆ ಹೋಗುವದಿಲ್ಲ. ಮಧುಕರನು ಆಕೆಯ ಮೈದುನನಾದರೂ ಅವಳ ಸುಖ ದುಃಖದ ಕಡೆಗೆ ಕಿವಿಗೊಡುವದಿಲ್ಲ."

"ನಿಜ ಮಗೂ. ಜಗತ್ತಿನಲ್ಲಿ ಮೈದುನನೆಲ್ಲಿ? ಸಹೋದರನೆಲ್ಲಿ? ಸುಧೆಯಂತಹ ಅನಾಥಳಿಗೆ ಇಡೀ ಜಗತ್ತಿನಲ್ಲಿ ಯಾರೊಬ್ಬರೂ ಇಲ್ಲ."

"ಇಂದು ಇರದಿದ್ದರೆ ನಾಳೆಯಾದರೂ ದೊರೆತರೇನು ಅಮ್ಮ?"

"ದೈವವೇ ಮೋಸಗೊಳಿಸಿದರೆ, ಮಳೆಯೇ ಸಿಡಿಲಾದರೆ, ಯಾರಿಗೆ ಮೊರೆಹೋಗಬೇಕು. ಹೇಳು."

"ದೇವರಿಗೆ."

"ಅವನ ಮೇಲೆ ನಿನ್ನಂತಹ ಹುಡುಗರಿಗೆ ಬರವಸೆಯಾದರೂ ಎಲ್ಲಿದೆ?"

"ಸತ್ತ ಮೇಲೆ ಸ್ವರ್ಗದಲ್ಲಿ ಕಾಣುವ ದೇವರ ಮೇಲೆ ನನಗೆ ವಿಶ್ವಾಸವಿಲ್ಲ. ಆದರೆ ಅಮ್ಮಾ, ಸಜ್ಜನರ ಹೃದಯದಲ್ಲಿ ಯಾವಾಗಲೂ ದೇವರ ದರಬಾರ ನಡೆಯುತ್ತಿದೆ. ಆ ಸಭೆಯಲ್ಲಿ ದಯೆಯೇ ನ್ಯಾಯಾಧೀಶ. ಸಮತೆಯೇ ಕಾನೂನು. ಬರೀ ಹೊಟ್ಟೆಯೊಂದನ್ನೇ ಕಂಡ ವೈದಿಕರ, ಇನ್ನೊಬ್ಬರ ರಕ್ತಹೀರಿ ಟೊಣಪರಾಗಿ ಬೆಳೆದ ಪರಮ ಸ್ವಾರ್ಥಿಗಳ ಸಾಕ್ಷಿಗಳಿಗೆ ಇಲ್ಲಿ ಬೆಲೆಯಿಲ್ಲ. ಇಂತಹ ದರಬಾರವು ಜಗತ್ತಿನಲ್ಲಿ ಇಲ್ಲದಿದ್ದರೆ ಬಲಶಾಲಿಗಳ ದವಡೆಯಿಂದ ಬಲಹೀನರು ಪಾರಾಗುವದೇ ಅಸಂಭವವಾಗಿತ್ತು."

"ಮಗೂ, ನೀನು ಮಲಗಿದ್ದು ನನ್ನ ತೊಡೆಯ ಮೇಲೆ. ಸಾಲೆಯಲ್ಲಿ ಹುಡುಗರ ಮುಂದೆ ನಿಂತಿಲ್ಲ."

ಆತನಿಗೆ ತನ್ನ ಮಾತು ಅಪ್ರಾಸಂಗಿಕವೆಂದು ಗೊತ್ತಿದ್ದಿಲ್ಲವೆಂತಲ್ಲ; ತುಂಬಿ ಬಂದ ಗಗನಕ್ಕೆ ಉಕ್ಕಿ ಹೊರಸೂಸುವ ಜಲಧಾರೆಯನ್ನು ತಡೆಯಲು ಎಂದಿಗೂ ಸಾಧ್ಯವಾಗುವದಿಲ್ಲ.

ತಾಯಿಯೇ ಮುಂದುವರಿದಳು. "ಅತ್ತಿಗೆಯ ಬಾಣಂತಿತನ ಮುಗಿಯುವ ವರೆಗೆ ನಿನ್ನಲ್ಲಿ ಒಂದೆರಡು ಅಕ್ಷರ ಕಲಿಯಬಹುದು. ಮುಂದೆ ಸಾವಂತವಾಡಿಗೆ ಹೋಗಲು ಎಲ್ಲವೂ ನೀರಿನಲ್ಲಿ ಹೋಮವಲ್ಲವೇ?"

"ಸುಂದರಾಬಾಯಿಯ ಬಯ್ಗಳನ್ನು ಕೇಳುವದಕ್ಕೆಂದೇ ಸುಧೆಯನ್ನು ವಿಧಾತನು ಸೃಷ್ಟಿಸಿರಬಹುದೇ? ಮನೆಯ ಮನುಷ್ಯರ ಉಪಯೋಗಕ್ಕಾಗಿಯೋ ಇಲ್ಲವೆ ಇಲಿ ಹೆಗ್ಗಣಗಳಿಗಾಗಿಯೋ?"

"ಸುಧೆಯ ಆತ್ಮೆಯನ್ನು ಇಲಿ ಹೆಗ್ಗಣಗಳ ಪಾಲಿಗೆ ಸೇರಿಸಿದೆಯಾ? ಇವನ್ನೆಲ್ಲ ನೋಡಿದವರ ರೂಪ ನಡತೆ, ಬುದ್ಧಿ ಇದ್ದೂ ಸುಧೆಯ ಜನ್ಮ ನಿರರ್ಥಕವಾಗಿ ಹೋಗುವುದು ಖಂಡಿತ."

"ಎಂಜಲು ತಿಪ್ಪೆಯಲ್ಲಿ ಬಿದ್ದ ಮುತ್ತನ್ನು ರತ್ನ ಪರೀಕ್ಷಕನು ಒಂದು ವೇಳೆ ಹೆಕ್ಕಿತೆಗೆಯದಿದ್ದರೆ ಕೋಳಿಯ ಹೊಡತಕ್ಕೆ ಸಿಕ್ಕು ಚೂರುಚೂರಾಗತಕ್ಕದ್ದೇ."

"ಯಾರಿಂದಲಾದರೂ ಆಕೆಯು ಶಿಕ್ಷಣ ಪ್ರಾಪ್ತಿಯಾಗಿದ್ದರೆ ಆಕೆ ಶಿಕ್ಷಕಿಯಾಗಿ ಇಲ್ಲವೆ ಸೂಲಗಿತ್ತಿಯಾಗಿ ಬದುಕಬಹುದಿತ್ತು."

"ಹೊಟ್ಟೆ ತುಂಬುವದೇ ಮುಖ್ಯವಾಗಿದ್ದರೆ ಈಗ ಹೊಟ್ಟೆಗಿಲ್ಲವೇ, ಅಮ್ಮಾ? ಆದರೆ ಬಳ್ಳಿಗೆ ನೂರು ಎಲೆಗಳಿಗಿಂತ ಒಂದು ಹೂವಿನಿಂದ ಬರುವ ಶೋಭೆಯೇ ಹಿರಿದಲ್ಲವೇ? ನಿನಗೇನು ಹೊಟ್ಟೆತುಂಬ ಊಟ ಸಿಕ್ಕಿದ್ದರೆ ಸಾಕೇ? ಸನ್ನ ಆಗಸ್ತ್ಯವಿಲ್ಲವೇ?"

ಸುಧೆಯ ಪುನರ್ವಿವಾಹದ ಸೂಚನೆ ಜಾನಕಿಯಮ್ಮನಿಗೆ ಸೇರಿತೇನೋ ನಿಜ ಆದರೆ ಮಾತ್ರ ಅರಗಲಿಲ್ಲ ಆಕೆ ವಿಚಾರಶೀಲಳಾಗಿ ಇನ್ನೊಂದು ಕಡೆ ನೋಡಹತ್ತಿದಳು

ಹಾಸಿಗೆಯ ಮೇಲೆ ಮಲಗಿದಾಗ ಸುಧಾಕರನಿಗೆ ಸಂಧ್ಯಾಕಾಲದಲ್ಲಿ ಸಮುದ್ರದ ದಂಡೆಯ ಮೇಲೆ ನಡೆದ ಘಟನೆ ನೆನಪಾಯಿತು. ಉಸುಕಿನಲ್ಲಿ ಸುಧೆಯು ಬರೆದ "ಸುಧಾಕರ" ಎಂಬ ಶಬ್ದ ಆತನ ಕಣ್ಣೆದುರು ಕುಣಿಯ ತೊಡಗಿತು. ಆ ಬರಹವೆಂದರೆ ಸುಧೆಯ ಚಟವೋ? ಅಥವಾ ತನ್ನ ಗೌಪ್ಯವನ್ನು ಕಾಪಿಡಲು ರತ್ನಾಕರನ ಹೃದಯವನ್ನು ಯೋಗ್ಯ ಹಾಗೂ ಆಳವಾದ ಹೃದಯ ಜಗತ್ತಿನಲ್ಲಿ ಇನ್ನಾವುದೂ ಇಲ್ಲವಾದ್ದರಿಂದ ಅವಳು ಆ ಹೆಸರನ್ನು ಸಾಗರತೀರದ ರೇವೆಯಲ್ಲಿ ಬರೆದಿರಬಹುದೋ? ಎಲೆಗಳಲ್ಲಿ ಹುದುಗಿರುವ ಹೂವಿನ ಅಸ್ತಿತ್ವವು ಅದರ ಸುವಾಸನೆಯಿಂದ

ಗೊತ್ತಾಗುತ್ತಿದೆ. ಉದಯಗಿರಿಯ ಮರೆಯಲ್ಲಿರುವ ಸೂರ್ಯನ ಸುಳಿವು ಅರುಣಕಿರಣಗಳಿಂದ ಗೋಚರವಾಗುತ್ತಿದೆ. ಹಿಮಶ್ರೀಯು ತನ್ನ ಒಡಲಿನಲ್ಲಿ ಗ್ರೀಷ್ಮಕ್ಕೆ ಸ್ಥಾನವಿತ್ತಿದಳೆಂಬುದು ಗಂಗೆಯ ನೆಗೆತದಿಂದ ವಿಶದವಾಗುತ್ತಿದೆ. ಜಗತ್ತಿನಲ್ಲಿ ಹೃದಯವನ್ನು ಅದಗಿಸಲು ಬರುವಂತಿಲ್ಲ. ಭೂಮಿಯಲ್ಲಿಯ ಆರ್ದ್ರತೆಯು ಹಸಿರು ಹುಲ್ಲಿನ ರೂಪದಿಂದ ಹೊರಬರುವಂತೆ ಸ್ಮಿತ, ಕಟಾಕ್ಷ, ಶಬ್ದ ಇತ್ಯಾದಿ ಸಂಗತಿಗಳಿಂದಲೇ ಹೃದ್ಗತ ಪ್ರಕಟವಾಗುತ್ತಿದೆ. ರೇವೆಯಲ್ಲಿ ಹೆಸರು ಬರೆದಿರುವದರಿಂದ ಅವಳಿಗೆ ನನ್ನಬಗ್ಗೆ ವಿಶಿಷ್ಟ ಭಾವನೆಯುಂಟಾಗಿದೆಯೆಂದು ಬಗೆಯಲೇ? ಹಾಗಾದರೆ ಇದನ್ನು ಕುಡಿಯಲ್ಲಿಯೇ ಕಡಿದೊಗೆಯುವುದು ಯೋಗ್ಯವಲ್ಲವೇ?

ಈ ಪ್ರಶ್ನೆಯ ಉತ್ತರವನ್ನು ಹುಡುಕುತ್ತಿರುವಾಗಲೇ ಸುಧಾಕರನಿಗೆ ನಿದ್ದೆಹತ್ತಿತು. ಅರ್ಧನಿದ್ರಿತ ಸ್ಥಿತಿಯಲ್ಲಿ ಅವನ ದೃಷ್ಟಿಗೆ ಒಂದು ವಿಲಕ್ಷಣ ದೃಶ್ಯ ಬಿದ್ದಿತು. "ಸುಧೆಯು ಸಮುದ್ರದ ದಂಡೆಯ ಮೇಲೆ ಉಸುಕಿನಲ್ಲಿ 'ಸುಧಾಕರ' ಎಂದು ಬರೆಯುತ್ತಿದ್ದಾಳೆ. ಅವಳು ಬರೆಯುತ್ತಿದ್ದಂತೆಯೇ ಸಮುದ್ರದ ತೆರೆಗಳು ಅದನ್ನು ಒರೆಸುತ್ತಿವೆ. ಈ ಕ್ರಮ ಎಷ್ಟೋ ಹೊತ್ತಿನ ತನಕ ನಡೆಯಿತು. ಸಾಗರ ಗರ್ಜಿಸಿತು. "ಏ ಹುಚ್ಚು ಹುಡುಗೀ, ನೀನು ಯಾರೊಡನೆ ಸ್ಪರ್ಧಿಸುತ್ತಿರುವಿ? ನನ್ನ ಒಂದೊಂದು ತೆರೆಗಳು ಇಂತಹ ಸಾವಿರಾರು ಹೆಸರುಗಳನ್ನು ತೊಳೆದು ಬಿಡಬಹುದು. ನನ್ನ ಸೀಮೆಯಲ್ಲಿ ಯಾರಾದರೂ ಗಗನಚುಂಬಿ ಜಯಸ್ತಂಬಗಳನ್ನು ನಿಲ್ಲಿಸಿದರೂ ಅರೆನಿಮಿಷದಲ್ಲಿಯೇ ನೆಲಸಮ ಮಾಡುವೆ. ಅಂದಬಳಿಕ ಬೆರಳಿನ ಲೆಕ್ಕಣಿಕೆಯಿಂದ ಉಸುಕಿನ ಕಾಗದದ ಮೇಲೆ ಬರೆದ ಈ ನಾಲ್ಕಕ್ಷರಗಳ ಗತಿಯೇನು?"

ಸುಧೆಯು ಸಾತ್ವಿಕ ಸಂತಾಪದಿಂದ ಉತ್ತರವನ್ನಿತ್ತಳು.

"ನನ್ನ ಬೆರಳಿನಿಂದ ರೇವೆಯಲ್ಲಿ ಬರೆದ ಹೆಸರನ್ನು ನೀನು ಹೇಳ ಹೆಸರಿಲ್ಲದಂತೆ ಮಾಡಿ ಬಿಡಬಹುದು. ಆದರೆ ಪ್ರೀತಿ ದೇವತೆಯು ನನ್ನ ಹೃದಯದಲ್ಲಿ ಕೊರೆದ "ಸುಧಾಕರ" ಎಂಬ ಅಕ್ಷರಗಳ ಮೇಲಿಂದ ಸಪ್ತ

ಸಾಗರಗಳು ಬಂದರೂ ಅವು ಅಳಿಸಲಾರವು. ಯಾಕೆಂದರೆ ಪ್ರೀತಿದೇವತೆಯು ಹೃದಯದಲ್ಲಿ ಆ ಅಕ್ಷರಗಳನ್ನು ಕೊರೆಯುವದಕ್ಕಿಂತ ಮುಂಚೆ ಅಮೃತವೃಷ್ಟಿ ಮಾಡಿರುವಳು.'

ಸಾಗರವು ಗರ್ಜಿಸಿತು. "ನಿನ್ನಂತಹ ಅಹಂಕಾರವುಳ್ಳ ಅನೇಕ ಹುಡುಗಿಯರನ್ನು ನೋಡಿದ್ದೇನೆ. ಕ್ಷಣಾರ್ಧದಲ್ಲಿಯೇ ನಿನ್ನ ಗರ್ವಭಂಗ ಮಾಡುವೆನು."

"ಸುಧೆಯು ತನ್ನ ಹೃದಯ ತೆರೆದಳು. ಆಕಾಶವು ಇಬ್ಭಾಗವಾಗಿ ಅದರಲ್ಲಿ ಮಿಂಚು ಹೊಳೆಯುವಂತೆ "ಸುಧಾಕರ" ಎಂಬ ಶಬ್ದ ಅದರಲ್ಲಿ ಕಂಡಿತು. ಸಾವಿರಾರು ತೆರೆಗಳ ತುರಗಗಳುಳ್ಳ ರಥವನ್ನೇರಿ ಸಾಗರವು ಆ ಹೆಸರಿನ ಮೇಲೆ ಏರಿಬಂದಿತು. ರಥವು ವೇಗವಾಗಿ ನಡೆಸಲ್ಪಡುತ್ತಿದ್ದುದರಿಂದ ಕುದುರೆಗಳ ಮುಖದಿಂದ ನೊರೆ ಇಳಿಯಹತ್ತಿತು. ರಥವು ಸುಧೆಯ ಹೃದಯದ ಮೇಲೆ ಏರಿಯೇ ಬಿಟ್ಟಿತು ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ ಸುಧೆಯ ಹೃದಯದಲ್ಲಿಯ ಆ ಹೆಸರು ಇದ್ದಕ್ಕಿದ್ದಂತೆಯೇ ಇತ್ತು ಅಷ್ಟೇ ಅಲ್ಲದೆ ಸಮುದ್ರದ ಪ್ರತಿಯೊಂದು ತೆರೆಯಮೇಲೆ ಆ ಹೆಸರು ನರ್ತಿಸಹತ್ತಿತು"

ಸುಧಾಕರನಿಗೆ ಎಚ್ಚರಾಯಿತು "ಮನಸ್ಸೆಂದರೆ ಒಂದು ವಿಲಕ್ಷಣ ಕಲ್ಪಕ ಕವಿ" ಎಂದು ಮನದಲ್ಲಿಯೇ ಅಂದುಕೊಂಡ. ನಿದ್ದೆಬರಲೆಂದು ಅತ್ತಿಂದಿತ್ತ ಇತ್ತಿಂದತ್ತ ಮಗ್ಗಲಾದ. ಆದರೆ ಶರೀರದ ಚಲನವಲನದಿಂದ ಮನಸ್ಸು ಸಮಾಧಾನಗೊಳ್ಳಲಾರದು. ಅವನ ಮನಸ್ಸು ಸುಧಾ ಮತ್ತು ವಾರುಣಿಯರ ಬಗ್ಗೆ ವಿಚಾರಮಾಡಹತ್ತಿತು. ಸುಧೆಯು ಈಗಷ್ಟೇ ಇಂಗ್ಲಿಷು ಕಲಿಯುತ್ತಿದ್ದಳು. ವಾರುಣಿಯು ಹಾಗೂ ಹೀಗೂ ಏಳನೇ ಇಯತ್ತೆಗೆ ಬಂದಿದ್ದಳು. ಭಾವನಾ ಪ್ರಧಾನ ಮನುಷ್ಯನ ಕಡುವೈರಿಯು ಕೂಡ ಅವನ ಮನಸ್ಸಿನಷ್ಟು ಕಠೋರ ಟೀಕಾಕಾರನಿರುವದಿಲ್ಲ. ಆತನ ಟೀಕಾಕಾರ ಮನಸ್ಸು ಒಳಗಿಂದೊಳಗೆ ತಿವಿಯಹತ್ತಿತು. "ಸುಧೆಯು ಬಾಲವಿಧವೆಯಾದುದರಿಂದ ಮರುಕವೆನಿಸುತ್ತದೆಯೆಂದೂ, ವಾರುಣಿಗೆ ಕಲಿಸಿದರೆ ಸಾಲೆಗೆ ಅವಳ ತಂದೆಯಿಂದ ಲಾಭವಾಗುತ್ತದೆಂದೂ, ನೀನು ಹೆರವರಿಗೆ ಹೇಳಬಲ್ಲೆ. ಆದರೆ ಮನುಷ್ಯನ ನಾಲಗೆ ಸ್ವರ್ಗದಲ್ಲಿದ್ದ

ರೂ, ಹೃದಯ ಪಾತಾಳದಲ್ಲಿರುತ್ತದೆಂಬುದು ನಿನಗೆ ಗೊತ್ತಿದೆ ಈ ಹುಡುಗಿಯರ ಸಹವಾಸದಲ್ಲಿ ನಿನಗೆ ಸುಖವಾಗುತ್ತಿದೆ. ಅವರ ರೂಪ ನೋಡಿ ನಿನ್ನ ಕಣ್ಣಿಗೆ ಆನಂದವಾಗುತ್ತಿದೆ. ಅವರ ಸ್ಪರ್ಶದಿಂದ ನಿನ್ನ ಪ್ರ ಮೋಹಿಸಿಹೋದಂತೆ ನಿನಗೆ ಭಾಸವಾಗುತ್ತದೆ ಆದ್ದರಿಂದಲೇ ನೀನು ಈ ಮಹೋಪಕಾರ ಮಾಡುವದಕ್ಕೆ ಹತ್ತಿದ್ದು ಸದಾನಂದ ಸ್ವಾಮಿಯವರ ಉಪದೇಶವನ್ನು ನೀನು ಇಷ್ಟರಲ್ಲಿಯೇ ಮರೆತುಬಿಟ್ಟಿಯಲ್ಲವೇ? ಸ್ತ್ರೀಯ ಸಹವಾಸವೆಂದರೆ ಮದ್ಯ. ಔಷಧಕ್ಕೆಂದು ಹೆಂಡ ಕುಡಿಯಹತ್ತಿದರೂ ಹೆಂಡಕುಡುಕತನದಲ್ಲಿಯೇ ಅದರ ಪರ್ಯವಸಾನವಾಗುವಂತೆ ಸ್ತ್ರೀಯರ ಸಲಿಗೆ ಮೋಹಕ್ಕೆಳೆಯದಿರದು. ಘೃತವು ಉಷ್ಣತೆ ತಾಕುವವರೆಗೇ ಚನ್ನಾಗಿರುತ್ತದೆ. ಆದರೆ ಅದಕ್ಕೆ ತುಸು ಉಷ್ಣತೆ ತಗಲಿದರೂ ಸಾಕು, ನೀರಾಗಿಯೇ ಆಗುತ್ತದೆ. ಅದರಿಂದ ತನ್ನನ್ನೇ ಮೋಸಗೊಳಿಸಿಕೊಂಡವರ ಜಗತ್ತಿನಲ್ಲಿ ನಿಜವಾದ ಕಾರ್ಯವಾಗುವದಿಲ್ಲ ”

ಈ ವಿಚಾರದಿಂದ ಸುಧಾಕರನ ಮನೋವೃತ್ತಿ ಉಕ್ಕಿಬಂದಿತು ಸುಧೆ ಮತ್ತು ವಾರುಣಿಯರ ವಿಷಯದಲ್ಲಿ ನನ್ನ ಭಾವನೆಯು ನನ್ನನ್ನು ವಂಚಿಸುತ್ತಿದೆಯೇ? ನಾನೂ ತರುಣನಿದ್ದೇನೆ ಅವರೂ ಹಾಗೆಯೇ! ಅದರಿಂದಲೇ ಅವರ ಬಗ್ಗೆ ನನಗೆ ಪ್ರೇಮವೆನಿಸುತ್ತಿದೆಯೇ? ಅಥವಾ ಅವರ ಭಾವೀ ಜೀವನವು ಸುಖಮಯವಾಗಬೇಕೆಂಬ ಸದಿಚ್ಛೆಯು ನನ್ನ ಕೃತಿಗಳ ಬುಡದಲ್ಲಿದೆಯೇ? ಅಮ್ಮನ ಸಹವಾಸದಲ್ಲಿ ನನಗೆ ಆನಂದವಾಗುವದೇನೋ ನಿಜ. ಆದರೆ ಅದು ಸಂಜೆಯ ಸೊಬಗಿನಂತೆ ಸೌಮ್ಯ ಮತ್ತು ವಿಶ್ರಾಂತಿದಾಯಕವಿರುತ್ತದೆ. ವಾರುಣಿ ಅಥವಾ ಸುಧೆಯರ ಸಹವಾಸದಲ್ಲಿ ಪ್ರಾತಃಕಾಲದ ಉಜ್ವಲ ಹಾಗೂ ಪ್ರೋತ್ಸಾಹಕ ಸೌಂದರ್ಯವಿರುತ್ತದೆ. ಈ ವ್ಯತ್ಯಾಸವೇಕೆ? ಅಮ್ಮನ ಮಾತು ಭೂಪಾಳಿಯಂತಿದ್ದರೆ ಈ ಹುಡುಗಿಯರ ಮಾತು ಒಂದು ಬಗೆಯ ಮೋಹಕಗೀತದಂತೆ. ಅಮ್ಮನ ಕೈ ಹರಸಲು ಎತ್ತಿದ ದೇವತೆಯ ಹಸ್ತದಂತಿದ್ದರೆ ಇವರಿಬ್ಬರ ಕೈ ಒಳ್ಳೇ ಸಲಿಗೆಯಿಂದಿದ್ದು ಒಮ್ಮೊಮ್ಮೆ ಬೆನ್ನ ಬಡಿಯುವ ಗೆಳೆಯರ ಕೈಗಳಂತೆ ಭಾಸವಾಗುತ್ತಿದೆ ಶಾಂತವಾಗಿ ಹರಿಯುವ ನದಿಯಂತೆ ಕಲಕಲ

ಸಿನಾದದಿಂದೊಪ್ಪುವ ನಿರ್ಝರಿಣಿಯಲ್ಲಿಯೂ ಆಕರ್ಷಕ ಶಕ್ತಿಯಿರುತ್ತದೆ. ಸುಧಾ ಮತ್ತು ವಾರುಣಿಯರ ಕಡೆಗೆ ನನಗಿರುವ ಒಲವೂ ಇದೇ ಪ್ರಕಾರದ್ದು.

ಈ ಆಕರ್ಷಣಕ್ಕೆ ಪಾಪವೆನ್ನಲಾಗುವದೇ? ಇವರಿಬ್ಬರಲ್ಲಿ ಯಾರೊಡನೆಯೂ ನನ್ನ ಲಗ್ನವಾಗದೆ ಬೇರೊಂದು ಹುಡುಗಿಯೊಡನೆ ಲಗ್ನವಾದರೆ ಆಕೆಯನ್ನು ನಾನು ಮೋಸಗೊಳಿಸಿದಂತಾದೀತೇ? ಲಗ್ನಕ್ಕೆ ಬಂದ ಹುಡುಗಿಯು ಕನ್ಯಾರ್ಥಿಯಾಗಿರುವ ಅನೇಕ ಜನರಿಗೆ ತೋರಿಸಲ್ಪಡುವದಿಲ್ಲವೆ? ಪ್ರತಿಯೊಬ್ಬನೂ ಆ ಹುಡುಗಿಗೆ ಭಾವೀ ಪತಿಯೆಂದೇ ಅನಿಸುತ್ತದಲ್ಲವೇ? ಅಂದಬಳಿಕ ಹುಡುಗಿಯು ಈ ವೃತ್ತಿಗೆ ಪಾಪವೆಂದು ಕರೆಯಬಹುದೇ? ಇವುಗಳನ್ನೆಲ್ಲ ಪಾಪವೆಂದು ತಿಳಿಯುವವಾದರೆ ಜಗತ್ತಿನಲ್ಲಿ ಧೃತರಾಷ್ಟ್ರನಂಥ ಕುರುಡನಿಗೆ ಮಾತ್ರ ಬದುಕಲು ಸಾಧ್ಯ.

ಸುಧಾಕರನ ಮನಸ್ಸಿನಲ್ಲಿ ಇದೇ ರೀತಿ ಅನೇಕ ವಿಚಾರಗಳು ಬರತೊಡಗಿದವು. ಅದೇ ಸ್ಥಿತಿಯಲ್ಲಿಯೇ ನಿದ್ದೆಹೋದ. ನಿದ್ದೆಯಲ್ಲಿಯೂ ಇಂತಹ ಅನೇಕ ಸಮಸ್ಯೆಗಳು ಸುಳಿದುಹೋಗಿರಬೇಕು.

\+ x x x +

ರಾತ್ರಿ ಮನೆಯ ಕೆಲಸ ಬೊಗಸೆಗಳನ್ನು ತೀರಿಸಿದ ನಂತರ ಸುಧಾಕರನು ಹೇಳಿಕೊಟ್ಟ ಪಾಠಗಳನ್ನು ಓದುವುದು ಸುಧೆಯ ಕಾರ್ಯಕ್ರಮ. ಬೆಳಗಿನಲ್ಲಿ ಎಲ್ಲರಿಗಿಂತ ಬೇಗ ಐದುಘಂಟೆಗೇ ಎದ್ದು ಮನೆಯ ಕೆಲಸ ನೋಡಿಕೊಂಡು ಜಾನಕಿಯಮ್ಮನ ಮನೆಗೆ ಹೋಗಿ ಅವಳ ಕೆಲಸದಲ್ಲಿ ನೆರವಾಗುತ್ತಿದ್ದಳು. ಆಮೇಲೆ ಸುಮಾರು ಒಂದು ತಾಸು ಸುಧಾಕರನಿಂದ ಪಾಠ ಹೇಳಿಸಿಕೊಳ್ಳುತ್ತಿದ್ದಳು. ಇಷ್ಟೆಲ್ಲ ಆದನಂತರ ಚಹಾ ತಯಾರಿಸಬೇಕಾಗುತ್ತಿತ್ತು. ಯಾಕಂದರೆ ದಾದಾಸಾಹೇಬರು ತಮ್ಮ ವೃತ್ತಪತ್ರಿಕೆಯ ಮೂಲಕ, ಮಧುಕರನು ತನ್ನ ಕಾವ್ಯದ ಮೂಲಕ, ಅತ್ತಿಗೆ ಬಾಣಂತಿತನದ ಮೂಲಕ ಎಂದೂ ಏಳು ಘಂಟೆಗಿಂತ ಮೊದಲು ಏಳುತ್ತಿರಲಿಲ್ಲ.

ದಿನದಂತೆ ತನ್ನ ಅಭ್ಯಾಸಕ್ಕಾಗಿ ಸುಧೆಯು ಬಂದಿದ್ದಳು. ಆಕೆಯ ಪಟ್ಟಿಯನ್ನು ನೋಡಿದೊಡನೆಯೇ ಸುಧಾಕರನು "ಇಂದಿನ ಅಕ್ಷರ ನೆಟ್ಟಗಾಗಿಲ್ಲ." ಎಂದನು.

"ನಿನ್ನೆ ರಾತ್ರಿ ಬೆರಳು ಕತ್ತರಿಸಿ ಹೋಯಿತು."

"ಬೆರಳು! ಹೇಗೆ?"

"ನಿನ್ನೆ ಸಮುದ್ರದಂಡೆಯಿಂದ ತಿರುಗಿ ಮನೆಗೆ ಬರುವಷ್ಟರಲ್ಲಿ ಭಾವನ ನಾಲ್ಕು ಕವಿಮಿತ್ರರು ಬಂದು ದಾರೀಕಾಯುತ್ತಿದ್ದರು. ಅವರಿಗಾಗಿ ತಡಮಾಡದೆ ಅವಲಕ್ಕಿ ಹಚ್ಚತೊಡಗಿದ್ದೆ. ಅಷ್ಟರಲ್ಲಿಯೇ ಭಾವನವರು ಒಳಗೆ ಬಂದು ಗಡಿಬಿಡಿಮಾಡಹತ್ತಿದರು. ಆ ಗಡಬಡಿಯಲ್ಲಿ ಕೊಬ್ಬರಿ ಹೆರೆಯುತ್ತಿರುವಾಗ ಬೆರಳಿಗೆ ಈಳಿಗೆ ತಾಕಿತು."

ಸುಧಾಕರನು ಆಕೆಯ ಬೆರಳಿಗೆ ಬೋರಿಕ್ ಪೌಡರ ಹಚ್ಚಿಸಿ ದಿನದಂತೆ ಅಭ್ಯಾಸ ತೆಗೆದುಕೊಂಡ. ಪಾರವಾದೊಡನೆಯೇ ಸುಧೆಯು ಮನೆಗೆ ನಡೆದಳು.

ಮಾರುತಿಗೆ ಬೇಗನೇ ಏಳುವ ಅಭ್ಯಾಸವಾಗಬೇಕೆಂದು ಆಕೆಗೆ ಏಳರಿಂದ ಎಂಟರವರೆಗೆ ಕಲಿಸುವದೆಂದು ಗೊತ್ತುಮಾಡಿದ್ದನು. ದಿನದಂತೆ ಸಮುದ್ರದ ತೀರದಮೇಲಿಂದ ರಾವಸಾಹೇಬರ ಮನೆಗೆ ಹೋದನು. ಅಂದು ಮಾರುತಿಯ ಕೋಣೆಯಲ್ಲಿ ಮಧುಕರ, ಅಣ್ಣಪ್ಪತನಯ, ರಾವಸಾಹೇಬರು ಕುಳಿತಿದ್ದರು. ಸುಧೆಯು ಕೈಬೆರಳು ಕತ್ತರಿಸಿ ಹೋಗುವದಕ್ಕೆ ಅಣ್ಣಪ್ಪತನಯರೇ ಕಾರಣವೆಂದು ಸುಧಾಕರನಿಗೆ ಹೊಳೆಯಿತು. ರೀತಿಯಂತೆ ನಮಸ್ಕಾರ ಚಮತ್ಕಾರಗಳಾಗಿ ಕುಶಲ ಪ್ರಶ್ನೆಗಳಾದವು.

ಅಣ್ಣಪ್ಪತನಯರ ಹೆಂಡತಿ ಕೆಲ ದಿನಗಳ ಹಿಂದೆ ತೀರಿಕೊಂಡರಂತೆ. ಅದರಿಂದ ಅವರೊಂದು ಮಹಾಕಾವ್ಯ ಬರೆದು ಮುದ್ರಿಸಿ ಅದರ ಮಾರಾಟಕ್ಕಾಗಿ ಬಂದಿದ್ದರು ಅಲ್ಲದೆ ಕಾವ್ಯವಿಲಾಸ ಮಂಡಳದವರು ಮಧುಕರನ ಎಲ್ಲ ಕವನಗಳನ್ನು ಶೀಘ್ರದಲ್ಲಿಯೇ ಪ್ರಕಟಿಸಲಿದ್ದಾರೆಂಬ ವಾರ್ತೆಯನ್ನೂ ತಂದಿದ್ದರು.

ಅಣ್ಣಾಪ್ಪ ತನಯರು ತಮ್ಮ ಕವನದ ಕೆಲ ಭಾಗವನ್ನು ಅಲ್ಲಿಯೇ ಓದತೊಡಗಿದರು. ತಮ್ಮ ಜಾಣ್ಮೆಯನ್ನು ತೋರಿಸಲು ಅವರು ಎಲ್ಲ ಉಪಮೆಗಳನ್ನೂ ಮಾತುಮಾತಿಗೆ ಬಳಸಿದರು. ಭಾಷಾಸಾಹಿತ್ಯಕ್ಕೆ ಇದೊಂದು ಅಪೂರ್ವ ಕಾಣಿಕೆಯೆಂದು ಮಧುಕರನೂ ಅಭಿಪ್ರಾಯಪಟ್ಟ. ಆದರೆ ಸುಧಾಕರನಿಗೆ ಮಾತ್ರ ಬೇಸರಕ್ಕಿಟ್ಟುಕೊಂಡಿತು. ಆರಾಣೆಕೊಟ್ಟು ಒಂದು ಪ್ರತಿಯನ್ನು ಕೊಂಡ. ಅಣ್ಣಾಪ್ಪ ತನಯರು ಮಾತ್ರ ವಾರುಣಿಗೆ ಹಾಗೂ ರಾವಸಾಹೇಬರಿಗೆ ಒಂದೊಂದು ಪ್ರತಿಯನ್ನು ಸಪ್ರೇಮಕಾಣಿಕೆಯಾಗಿ ಕೊಡಲು ಮರೆಯಲಿಲ್ಲ.

ಅಣ್ಣಾಪ್ಪ ತನಯರು ತಮ್ಮ ಮುದ್ರಿತ ಕಾವ್ಯವನ್ನು ಸಾವಂತವಾಡಿಯ ಸರದಾರರಿಗೆ ಅರ್ಪಣೆ ಮಾಡುವವರಿದ್ದುದರಿಂದ ಎಲ್ಲರೂ ಸ್ಪೆಶಲ್ ಕಾರು ಮಾಡಿಕೊಂಡು ಹೋದರು. ವಾರುಣಿಯೂ ಅವರ ಜೊತೆಗೆ ಹೋದುದರಿಂದ ಸುಧಾಕರನು ಹಾಗೆಯೇ ಮನೆಗೆ ಬಂದ.

ಮಾರನೆಯ ದಿನ ಸುಧಾ– ವಾರುಣಿಯರ ನಿಬಂಧ ನೋಡಿದ. ಅವರಿಗೆ " ರಾಣಿಯರಾದರೆ ಏನು ಮಾಡುವಿರಿ?" ಎಂಬ ವಿಷಯದ ಬಗ್ಗೆ ಬರೆಯಲು ಹೇಳಿದ್ದ. "ರಾಣಿಯಾದ ಮೇಲೆ ಬಡವರ ಮಕ್ಕಳಿಗೆ ಹಾಲು ಅನ್ನ ಪೂರೈಸುವದು, ಅವರಿಗೆ ಶಿಕ್ಷಣ ಕೊಡುವದು, ಅನಾಥರನ್ನು ಅರಮನೆಯಲ್ಲಿ ತಂದು ಅವರಿಗೆ ಸಾದಾತನದ ಅಭ್ಯಾಸವಾಗಬೇಕೆಂದು ತಾನೂ ಸಾದಾರೀತಿಯಿಂದ ಇರುವದು" ಇತ್ಯಾದಿಯಾಗಿ ಸುಧೆಯು ಮನೋರಾಜ್ಯ ಕಟ್ಟಿದ್ದಳು. ಆದರೆ ವಾರುಣಿಯು "ಎತ್ತರದ ದಿನ್ನೆಯ ಮೇಲೆ ಬಂಗಲೆ ಕಟ್ಟಿಸಿ, ವಜ್ರ ವೈಢೂರ್ಯದಿಂದ ಅಲಂಕರಿಸಿ, ಮೋಟರ ಮೇಲೆ ನಾಟಕಕ್ಕೆ ಹೋಗುವದು–ದೊಡ್ಡದೊಂದು ಅರಿಸಿಣ ಕುಂಕುಮದ ಸಮಾರಂಭವನ್ನೇರ್ಪಡಿಸಿ ಹೆಂಗಸರಿಗೆ ಸೀರೆಕುಪ್ಪಸ ಹಂಚುವದು" ಎಂದು ಮುಂತಾಗಿ ಬರೆದಿದ್ದಳು.



# ಪ್ರಕರಣ. ೨೧.

ಸುಧಾಕರನಿಗೆ ಶಾಲೆಯ ಹುಡುಗರ ಪಟ್ಟಿ ನೋಡುವನು, ಪೇಪರು ತಪಾಸಿಸುವದು ಹಾಗೆಯೇ ಉಳಿದಿತ್ತು. ಮೊದಲು ಪೇಪರು ನೋಡಹತ್ತಿದ. ವಿದ್ಯಾರ್ಥಿಗಳು ಮನಬಂದಂತೆ ಉತ್ತರ ಬರೆದಿದ್ದರು ಅವನ್ನೆಲ್ಲ ನೋಡುತ್ತ ಹೋದಂತೆ ಮೊದಲು ನಗು ಬರುತ್ತಿತ್ತಾದರೂ ಕೊನೆಗೆ ಕನಿಕರವೆನಿಸುತ್ತಿತ್ತು.

ಎದುರಿನಲ್ಲಿ ಬಿದ್ದಿದ್ದ ಪೇಪರಿನ ಕಡೆ ನೋಡನೋಡುತ್ತ ಸುಧಾಕರನ ಮನಸ್ಸಿನಲ್ಲಿ ಕೋಲಾಹಲವೇ ಎದ್ದುಬಿಟ್ಟಿತು. ಹುಡುಗರಿಗೆ ಸಿಗುವ ಶಿಕ್ಷಣವು ಈ ರೀತಿ ಹುರಳಿಲ್ಲದುದಾದರೆ ಆ ಶಿಕ್ಷಣದಿಂದ ದೇಶದ ಹಿತವೇನು ಸಾಧಿಸುವಂತಿದೆ? ಉಸುಕಿನ ನೆಲಗಟ್ಟಿನ ಮೇಲೆ ಮುಗಿಲು ಮುಟ್ಟುವ ಕಟ್ಟಡ ಕಟ್ಟುವದಕ್ಕೆ ಯತ್ನಿಸುವವರಲ್ಲಿ ಅರ್ಥವಿಲ್ಲ. ಶಿಲ್ಪಿಗನ ಅಜ್ಞಾನದಿಂದ ಹೆಚ್ಚೆಂದರೆ ಒಂದು ಕಲ್ಲು ನಿರುಪಯೋಗಿಯಾಗಬಹುದು. ಆದರೆ ಶಿಕ್ಷಕನ ಅಜ್ಞಾನದಿಂದ ನೂರಾರು ಜೀವ ಮಣ್ಣುಪಾಲಾಗುತ್ತಿವೆ. ಸಿಕ್ಕ ದಂಧೆಮಾಡಿ ಅದರಿಂದ ತನಗಾವ ಹಾನಿಯೂ ತಟ್ಟದಂತೆ ದೂರದೃಷ್ಟಿಯಿಟ್ಟು ಆದಷ್ಟು ಹೆಚ್ಚಿಗೆ ಹಣ ಗಳಿಸುವದು, ಗಳಿಸಿದ ಹಣದಿಂದ ಮನೆಕಟ್ಟುವದು, ಹೆಂಡತಿಯನ್ನು ಬಂಗಾರದಿಂದ ಸಿಂಗರಿಸುವದು—ಇವೇ ಮೊದಲಾದವನ್ನು ಕಲಿಯುವದಕ್ಕೆ ಸಾಲೆಯೇ ಏಕೆ ಬೇಕು? ಅಶಿಕ್ಷಿತ ಜನರೂ ಇವನ್ನು ಮಾಡಬಲ್ಲರು. ಜ್ಞಾನಗಿರಿಯ ಶಿಖರವನ್ನೇರುತ್ತ ಹೋದಂತೆ ಮನುಷ್ಯನ ಸಂಕುಚಿತ ದೃಷ್ಟಿ ವ್ಯಾಪಕವಾಗುತ್ತದೆ. ಕೂಪ ಮಂಡೂಕವೃತ್ತಿ ಅಳಿದುಹೋಗುತ್ತದೆ. ಸಹಾನುಭೂತಿಯ ಕ್ಷಿತಿಜ ವಿಸ್ತರಿಸುತ್ತದೆ. ನೆಲದ ಮೇಲಿರುವಾಗ ಗಗನಚುಂಬಿಯಂತೆ ಕಾಣುವ ಗಿಡಗಳು ಹುಲ್ಲಿನಂತೆ ಚಿಕ್ಕದಾಗಿ ಕಾಣಹತ್ತುತ್ತವೆ. ಉಪಭೋಗದ ವೃತ್ತಿಯು ಲಯವಾಗಿ ತಪಶ್ಚರ್ಯದ ಕಡೆ ಮನಸ್ಸು ಹೊರಳುತ್ತದೆ. ಆದರೆ ಇವೆಲ್ಲ ಲಭಿಸುವದು ದುರ್ಗಮಜ್ಞಾನ ಪರ್ವತವನ್ನೇರುವ ಸಾಹಸಿಗೆ ಮಾತ್ರ. ಎಂದ ಮೇಲೆ ಆ ಪರ್ವತದ ಅಡಿಯ ಕಲ್ಲಿಗೇ ಎಡವಿ ಕೆಳಕ್ಕುರುಳುತ್ತ ಬರುವವರಿಗೆ ಅವುಗಳ

ಪ್ರಯೋಜನವೇನು ? ಆದರೆ ವಿದ್ಯಾರ್ಥಿಗಳು ಮೊದಲಿನ ಕಲ್ಲಿಗೇ ಏಕೆ ಎಡವಿಬೀಳುತ್ತಾರೆ? ಅವರ ಈ ಪತನಕ್ಕೆ ಹೊಣೆಯಾರು? ಸ್ವತಃ ಅವರೋ, ಪಾಲಕರೋ ಅಥವಾ ಶಿಕ್ಷಕರೋ?

ದಾದಾಸಾಹೇಬರಿಂದ ಕರೆ ಬಂದುದರಿಂದ ಸುಧಾಕರನು ಪೇಪರವನ್ನು ಅಲ್ಲಿಯೇ ಒಗೆದು ಹೋದ. ದಾದಾಸಾಹೇಬರ ಮನೆಯಲ್ಲಿ ಒಂದು ಚಿಕ್ಕ ಶಿಕ್ಷಕ ಸಮ್ಮೇಲನವೇ ನೆರೆದಿತ್ತು. ಒಬ್ಬೊಬ್ಬ ಶಿಕ್ಷಕರು ಒಂದೊಂದು ರೀತಿಯಿಂದ ಕುಳಿತಿದ್ದರು. ಟೆನ್ನಿಸ ಹಾಗೂ ಕ್ರಿಕೆಟ್ ಆಡುವ ಸಲುವಾಗಿ ಮುಂಬೈಯಲ್ಲಿ ಕೂಡಿಸಿದ ಹಣವನ್ನೂ ವಿನಯೋಗಿಸಬೇಕೆಂಬ ಕರಾರಿನಿಂದ ದಾದಾಸಾಹೇಬರು ೫೦೦ ರೂಪಾಯಿ ದೇಣಿಗೆ ಕೊಟ್ಟ ಶುಭವಾರ್ತೆಯನ್ನು ಅರುಹುವುದಕ್ಕಾಗಿಯೇ ದಾದಾಸಾಹೇಬರು ಸುಧಾಕರನನ್ನು ಕರೆಯಿಸಿದ್ದರು.

"ಮುಂಬಯಿಯ ಹಣ ವ್ಯಾಯಾಮ ಸಾಲೆಗೋಸ್ಕರ ಕೂಡಿಸಿದ್ದಲ್ಲವೇ?" ಸುಧಾಕರನು ಕೇಳಿದ.

"ಹೂಂ, ಟೆನ್ನಿಸ ಕೂಡ ಒಂದು ವ್ಯಾಯಾಮವೇ." ಮಧುಕರನು ನುಡಿದ.

"ಆದರೆ ಇದರ ಉಪಯೋಗ ಯಾರಿಗೆ ಎಂಬುದನ್ನು ಯೋಚಿಸಬೇಡವೇ? ದೇವರಿಗೆ ಪ್ರದಕ್ಷಿಣೆ ಹಾಕುವದೂ ಒಂದು ವ್ಯಾಯಾಮವೇ ಎಂದು ಸಾಲೆಯ ಹತ್ತಿರವೇ ಮಾರುತಿಗುಡಿ ಕಟ್ಟಿಸುವಿರಾ?"

"ಸದ್ಯ ಟೆನ್ನಿಸ ಆಡುತ್ತಿರುವ ಇಂಗ್ಲಿಷರೇ ನಮ್ಮ ಮೇಲೆ ರಾಜ್ಯ ವಾಳುತ್ತಾರೆಂಬುದನ್ನು ಮರೆಯಬೇಡಿ."

"ಇಂಗ್ಲಿಷರು ಆಡುತ್ತಾರೆಂದ ಮಾತ್ರಕ್ಕೆ ಚೆನ್ನಾಗಿ ಆಡುವವನಿಗೇ ಗವರ್ನರ ಮಾಡುತ್ತಾರೆಂದು ಹೇಳಲಿಕ್ಕೆ ಆಗದು."

ಸಾಲೆಯಲ್ಲಿಯ ಬಡ ಹುಡುಗರ ವ್ಯಾಯಾಮದ ದೃಷ್ಟಿಯಿಂದ ಟೆನ್ನಿಸು, ಕ್ರಿಕೆಟು ನಿರುಪಯೋಗಿಯೆಂದು ಸುಧಾಕರನು ದಾದಾಸಾಹೇಬರ ನಿದರ್ಶನಕ್ಕೆ ತಂದನು. ಸಾಲೆಯ ಫೀ ಕೊಡುವದಕ್ಕೇ ಮೇಲೆ ಕೆಳಗೆ ನೋಡುತ್ತಿರುವ ಹುಡುಗರಿಗೆ ಇಂತಹ ದುಡ್ಡಿನ ಆಟ ಆಡುವ ಚಟ

ಹೆಚ್ಚುವದು ಯೋಗ್ಯವಲ್ಲವೆಂದೂ ಪ್ರತಿಪಾದಿಸಿದನು. ಹುಡುಗರ ವ್ಯಾಯಾಮಸಾಲೆಗೋಸ್ಕರ ಕೂಡಿಸಿದ ಹಣದಿಂದ ಟೆನ್ನಿಸಕೋರ್ಟ ಕಟ್ಟಿ ಅದರಲ್ಲಿ ನಾಲ್ಕು ಶಿಕ್ಷಕರು ಇಲ್ಲವೆ ಊರೊಳಗಿನ ಪ್ರತಿಷ್ಠಿತ ಗೃಹಸ್ಥರು ಆಡುವದೆಂದರೆ ಮನೆಯೊಳಗಿನ ಚಿಕ್ಕಮಕ್ಕಳನ್ನು ಬತ್ತಲೆ ಬಿಟ್ಟು ಅಪ್ಪನು ತನಗೋಸ್ಕರ ರೇಶಿಮೆ ಬಟ್ಟೆ ಹೊಲಿಸಿದಂತೆಯೇ ಸರಿ ಎಂದು ಹೇಳಲಿಕ್ಕೂ ಹಿಂಜರಿಯಲಿಲ್ಲ. ಆದರೆ ಬುಡಮೇಲಾಗಿಟ್ಟ ಕೊಡದ ಮೇಲೆ ಕಡಲಿನ ಎಲ್ಲಾ ನೀರು ತಂದು ಸುರುವಿದರೂ ಅದು ತುಂಬಬಲ್ಲದೇ?

ದಾದಾಸಾಹೇಬರು ಸುಧಾಕರನಿಗೆ ವ್ಯವಹಾರಜ್ಞಾನವನ್ನು ಬೋಧಿಸಹತ್ತಿದರು. "ಸುಧಾಕರರಾಯರೇ, ನಿಜವಾದ ಜಗತ್ತು ಕಾಲೇಜಿನ ವಾತಾವರಣಕ್ಕಿಂತ ಭಿನ್ನವಾದದ್ದಿರುತ್ತದೆ. ಈಗ ರಾವಸಾಹೇಬರ ಮಾತಿನಂತೆ ನಡೆದರೆ ಮುಂದೆ ಇದಕ್ಕೂ ಹೆಚ್ಚಿಗೆ ಲಾಭವಾಗುವ ಸಂಭವವಿರುತ್ತದೆ."

"ಇರುವೆಯ ಯುಕ್ತಿಯಿಂದರೆ ಆನೆಯ ಶಕ್ತಿಗೆ ಸಮ ಈ ಟೆನ್ನಿಸಕೋರ್ಟಗೆ 'ಓಲ್ಡ ಫೂಲ್ಸ ಟೆನ್ನಿಸಕೋರ್ಟ' ಎಂಬ ಹೆಸರಿಡತಕ್ಕದ್ದಿದೆ. ಅದು ಸಹಜವಾಗಿ ಡಾಯರೆಕ್ಟರ ಸಾಹೇಬರ ಕಿವಿಗೆ ಹೋಗಿಯೇ ತೀರುವದು. ಈ ಸಾಲೆಯು ಒಬ್ಬ ಸಾಹೇಬನಿಗೆ ಮಾಡಿದ ಗೌರವವನ್ನು ನೋಡಿ ಗ್ರ್ಯಾಂಟೂ ಹೆಚ್ಚಿಗೆ ಸಿಗಬಹುದು "ಎಂದು ಸುಧಾಕರನು ಅನುಮೋದಿಸಿದ.

ಉಳಿದ ಶಿಕ್ಷಕರೂ ದಾದಾಸಾಹೇಬರ ಪಕ್ಷವನ್ನೇ ಸಮರ್ಥಿಸಿದ್ದರಿಂದ ಸುಧಾಕರನಿಗೆ ಹೆಚ್ಚಿಗೆ ವಾದಿಸುವದರಲ್ಲಿ ಹುರುಳು ಕಾಣಲಿಲ್ಲ. ಎಲ್ಲರೂ ರಾವಸಾಹೇಬರ ಮನೆಗೆ ಹೋಗಲು ಹೊರಟರು. ಸುಧಾಕರನು ಕೆಲಸವಿದೆಯೆಂದು ತನ್ನ ಮನೆಯ ದಾರಿಹಿಡಿದ. ಹಿಂತಿರುಗಿ ನೋಡಿದಾಗ ಉಳಿದ ಶಿಕ್ಷಕರು ಉಲ್ಹಾಸದಿಂದ ನಗುತ್ತ ಕೆಲೆಯುತ್ತ ಸಾಗಿದ್ದರು. ತನ್ನ ದಾರಿ ಯಾವಾಗಲೂ ಹೀಗೆಯೇ ಭಿನ್ನವಾದೀತೇ ಎಂಬ ಶಂಕೆ ಅವನ ಮನಸ್ಸಿನಲ್ಲಿ ಉದ್ಭವಿಸಿತು.

ಆ ದಿನ ಸುಧಾಕರ ಊಟದ ಶಾಸ್ತ್ರವನ್ನೇನೋ ಮುಗಿಸಿದ. ನಿರ್ಮಲ ಮೇಘಜಲವು ಪೃಥ್ವಿಯ ಮೇಲೆ ಬರಲು ಒಮ್ಮೊಮ್ಮೆ ಗಟಾರಿ

ನಿಂದ ಸಹ ಹರಿದು ಹೋಗಬೇಕಾಗುತ್ತದೆ. ತನ್ನ ಧ್ಯೇಯವೂ ಹಾಗೇ ಆಗಬಹುದೇ ಎಂಬ ಚಿಂತೆಯು ಆತನನ್ನು ಕೊರೆಯಹತ್ತಿತು.

ಮೂರನೇ ದಿನವೂ ಕ್ಲಾಸಿನಲ್ಲಿ ಆತನಿಗಾಗಿ ಕಟು ಅನುಭವವು ಕಾದಿತ್ತು. ಏಳನೆಯ ವರ್ಗಕ್ಕೆ ಬಂದೊಡನೆಯೇ ಯಾರೋ ತನ್ನ ಬೆಂಚಿನ ಮೇಲೆ ಇಟ್ಟ ಪತ್ರವನ್ನು ವಾರುಣಿಯು ಕೊಟ್ಟಳು. ಅದು ಪ್ರೇಮ ಪತ್ರವಿರಬೇಕೆಂದು ಸಂಶಯಬಂದರೂ ಓದಿದ. ಅವನ ಸಂಶಯ ನಿಜವೇ ಆಗಿತ್ತು. ಅದರಲ್ಲಿ ಕಾಮುಕನು ಕಾದಂಬರಿಯ ಕೈಗಡತಂದ ಶಬ್ದಗಳನ್ನು ಯಥೇಚ್ಛವಾಗಿ ಬಳಸಿದ್ದನು. 'ನಿನ್ನಮೇಲೆ ನನ್ನ ಪ್ರೇಮವಿದೆ. ವರ್ಗದಲ್ಲಿ ಮಾಸ್ತರರಿಗಿಂತ ನಿನ್ನ ಮುಖದ ಮೇಲೆಯೇ ನನ್ನ ಕಣ್ಣು ವಿಶೇಷವಾಗಿ ನಟ್ಟಿರುತ್ತದೆ.' ಇತ್ಯಾದಿಯಾಗಿ ಬರೆದದ್ದನ್ನು ನೋಡಿದೊಡನೆಯೇ ಹರಿದು ಒಗೆದುಬಿಟ್ಟ. ಆದರೆ ಪತ್ರ ಹೋದರೂ ಅದರಲ್ಲಿಯ ವಿಷಯ ಮರೆಯಾಗಲಿಲ್ಲ. 'ಅಗರಕರರ ದಿನಾಚರಣೆಯಲ್ಲಿ ಕಂಠಶೋಷ ಮಾಡಿಕೊಂಡದ್ದರ ಪರಿಣಾಮ ಏನೂ ಆಗಲಿಲ್ಲವೇ? ಹದಿನೇಳು, ಹದಿನೆಂಟು ವಯಸ್ಸಿನ ಮಕ್ಕಳು ಅಭ್ಯಾಸ ಬಿಟ್ಟು ಪ್ರಣಯಚೇಷ್ಟೆಯನ್ನು ಆರಂಭಿಸಬೇಕೇ? ವಿದ್ಯಾದೇವಿಗಿಂತ ವಿದ್ಯಾರ್ಥಿನಿಯರ ಕಡೆಗೆ ಅವರ ಒಲವಿರಬೇಕೇ?'' ಎಂದು ಯೋಚಿಸಹತ್ತಿದ.

ಇಡೀ ವರ್ಗಕ್ಕೆ ಹೊಡೆದು, ಬಡೆದು, ಅಪರಾಧಿಯನ್ನು ಹುಡುಕಬಹುದಿತ್ತು. ಆದರೆ ಒಂದು ಮುಳ್ಳುತೆಗೆಯಲು ಇಡೀ ಕಾಲು ತೂತುಮಾಡುವ ಸ್ವಭಾವ ಆತನದಿರಲಿಲ್ಲ. ಅಲ್ಲದೆ ಮೂರೇ ಮಂದಿಗೆ ಗೊತ್ತಿದ್ದ ಈ ಸಂಗತಿ ಎಲ್ಲರಿಗೂ ತಿಳಿದು ತೊಂದರೆಯಾಗುವಂತಿತ್ತು. ಅದರಿಂದ ತನ್ನ ಪಾಠ ಆರಂಭಿಸಿದ.

ಮೊಟ್ಟಮೊದಲು ಜಗನ್ನಾಥನಿಗೆ ಪ್ರಶ್ನೆ ಕೇಳಲು ಎದ್ದು ನಿಲ್ಲಿಸಿದ. ಅವನ ಆ ಜಿನುಗಾದ ವಸ್ತ್ರದಕೋಟು, ಶರ್ಟಿನ ಬೆಳ್ಳಿಯ ಗುಂಡಿ, ಟೊಪ್ಪಿಗೆಯ ಹೊರಗೆ ತಲೆಹಾಕಿ ನೋಡುವ ಕೂದಲಿನ ಬೈತಲೆ- ಇವೆಲ್ಲ ಸಂಗತಿಗಳನ್ನು ನೋಡಿದರೆ ಅವನು ಅನಾಥ ಹುಡುಗನೆಂದು ಯಾರಿಗೂ ಅನಿಸುತ್ತಿದ್ದಿಲ್ಲ. ಮೇಲಿಂದ ಮೇಲೆ ಪ್ರಶ್ನೆ ಕೇಳಿದರೂ ಉತ್ತರ ಬಾರದ್ದ

ರಿಂದ ಜಗನ್ನಾಥನನ್ನು ಹತ್ತಿರಕ್ಕೆ ಕರೆದ. ಆವನು ಹತ್ತಿರ ಬರಹತ್ತಲು ಅತ್ತರಿನ ವಾಸನೆ ಇಡುಗಹತ್ತಿತು. ಇದರಿಂದ ಸುಧಾಕರನಿಗೆ ಇನ್ನಷ್ಟು ಸಿಟ್ಟು ಬಂದಿತು. "ಮನೆಯವರೆಲ್ಲ ಮುಸುರಿ ತಿಕ್ಕಿ ಹೊಟ್ಟೆ ತುಂಬುತ್ತಿರುವಾಗ ನೀನು ಯಾವುದಾದರೂ ಉದ್ಯೋಗ ಮಾಡುವುದು ಲೇಸು. ನಾಳೆ ಗದ್ದೆಹೂಡುವ ಪ್ರಸಂಗ ಬಂದರೆ ಕೈಕಾಲಿಗೆ ಕೆಸರೇ ಹತ್ತಬಹುದು. ಹೊಲದಲ್ಲಿ ಅತ್ತರು ಬೆಳೆಯುವದಿಲ್ಲ." ಎಂದು ಮುಂತಾಗಿ ಛೀ ಹಾಕಿದನು. ಜಗನ್ನಾಥನು ಹಲ್ಲುಕಡಿಯುತ್ತ ಜಾಗೆಯ ಮೇಲೆ ಹೋಗಿ ಕುಳಿತುಕೊಂಡು ಪುಸ್ತಕವನ್ನು ಮೋರೆಯ ಮುಂದೆ ಹಿಡಿದು ವಾರುಣಿಯ ಕಡೆ ನೋಡಿದನು. ಇತರ ಹುಡುಗರಂತೆ ಅವಳೂ ಅವನ ಕಡೆ ನೋಡಿ ನಗುತ್ತಿದ್ದಳು.

ಸುಧಾಕರನ ಉದ್ವಿಗ್ನತೆಯನ್ನು ಹೆಚ್ಚಿಸಲು ಇನ್ನೆರಡು ಸಂಗತಿ ಕಾರಣವಾದವು. ಅವುಗಳಲ್ಲಿ ಒಂದು ಕಾಳೆಯ ಪತ್ರ, ಇನ್ನೊಂದು ಸಾವಂತವಾಡಿಯಲ್ಲಿ ಹೊರಡುವ ವೃತ್ತಪತ್ರಿಕೆ. ಕಾಳೆಯು ತನ್ನ ಪತ್ರದ ಜೊತೆಯಲ್ಲಿ ಒಂದು ಕವಿತೆಯನ್ನು ಕಳಿಸಿದ್ದನು. ಕವಿತೆಯಲ್ಲಿಯ ಕಲ್ಪನೆ ಚೆನ್ನಾಗಿತ್ತು. ಆದರೆ ಸರದಾರ ಗೃಹದಲ್ಲಿ ಕಂಡ ಹುಡುಗಿಯ ಹುಚ್ಚು ಆತನನ್ನು ಬಿಟ್ಟಿಲ್ಲವೆಂದು ಅದರಿಂದ ವ್ಯಕ್ತವಾಗುತ್ತಿತ್ತು. ಕಾಳೆಯು ಹೀಗೆ ಪ್ರಣಯದಲ್ಲಿಯೇ ಗುಂಗಾಗಿ ಬಿಟ್ಟರೆ ಶಿಕ್ಷಣವನ್ನು ಮುಗಿಸಿ ತನ್ನೊಡನೆ ಬಂದು ಸೇರುವದು ದುಸ್ಸಾಧ್ಯವೆಂದು ಸುಧಾಕರನಿಗೆ ಅನಿಸಿತು. ದಾದಾಸಾಹೇಬರು ತೋರಿದ ವೃತ್ತಪತ್ರಿಕೆಯಲ್ಲಿ ಸುಧಾಕರನು ಆಗರಕರರ ಸ್ಮೃತಿದಿನಮಾಡಿದ ವ್ಯಾಖ್ಯಾನದ ಅಸಂಬದ್ಧ ಟೀಕೆಯಿತ್ತು. ಅದನ್ನು ನೋಡಿ ಲೇಖಕನ ಮೂರ್ಖತನದ ಬಗ್ಗೆ ನಗುಬಂದಿತು. ಆದರೆ ತನ್ನ ಭಾಷಣವು ಇಷ್ಟರ ಮಟ್ಟಿಗೆ ವಿಪರ್ಯಾಸ ಹೊಂದಿದ್ದನ್ನು ಕಂಡು ಕೆಡುಕೆನಿಸಿತು.

ಸಾಯಂಕಾಲ ಸಾಲೆ ಬಿಟ್ಟೊಡನೆಯೇ ದಾದಾಸಾಹೇಬರು ಜೂನ ತಿಂಗಳ ಪಗಾರವೆಂದು ಐವತ್ತು ರೂಪಾಯಿ ಕೊಟ್ಟರು. ಅದರ ಜೊತೆಗೆ ಜಗನ್ನಾಥನಂತಹ ಎಷ್ಟೋ ಬಡ ಹುಡುಗರಿಗೆ ಮಾಫಿ, ಅರ್ಧಮಾಫಿ ಮಾಡಿದ್ದರಿಂದ ಉತ್ಪನ್ನ ಕಡಿಮೆಯಾಗಿದೆಯೆಂದು ಹೇಳಲು ಮರೆಯಲಿಲ್ಲ.

"ಮನೆಗೆ ಬಂದು ತಾಯಿಗೆ ಕೊಡುವದಕ್ಕಾಗಿ ೫೦ ರೂಪಾಯಿಗಳನ್ನು ತೆಗೆದು ಮೇಜಿನ ಮೇಲಿಟ್ಟ. ಅಲ್ಲಿ ಸುಧೆಯು ಮೊದಲೇ ಮಲ್ಲಿಗೆಯ ಮೊಗ್ಗುಗಳನ್ನು ತಂದಿಟ್ಟಿದ್ದಳು. ಅವನ್ನು ಕಂಡು ಆತನಿಗೆ ಯಾವ ವಿಚಾರ ಬಂದಿತೋ ಯಾರು ಬಲ್ಲ? ತಾನಿರಿಸಿದ ರೂಪಾಯಿಗಳನ್ನು ಅತ್ತ ಸರಿಸಿ ಆ ಮೊಗ್ಗೆಗಳಲ್ಲಿ ಕೆಲವನ್ನೆತ್ತಿ ತನ್ನ ಹೃದಯಕ್ಕೆ ಒತ್ತಿಕೊಂಡನು.

* * * *

"ಮಗೂ, ಎಷ್ಟು ರೂಪಾಯಿ ಇವೆ?"

"ಐವತ್ತು."

"ನುಂಪೆ ಯಾವ ಪರಾತಂಕತೆಯೂ ಆಗಲಿಲ್ಲ. ಆದರೆ ನೂರು ರೂಪಾಯಿಯ ಕೆಲಸಬಿಟ್ಟು ೫೦ ರೂಪಾಯಿಗೆ ಬಂದದ್ದು ತಾಯಿಗೆ ಸೇರಲಿಕ್ಕಿಲ್ಲವೆಂದು ಯೋಚಿಸಹತ್ತಿದ. ಇಡೀ ಜಗತ್ತೇ ಹಣದ ಹಿಂದೆ ಓಡುತ್ತಿದೆ. ಕಾಳು ಒಗೆದು ಕೋಳಿಯ ಕಾದಾಟ ನೋಡುವಂತೆ, ಲಕ್ಷ್ಮಿಯು ತನ್ನ ತಾಟಿನೊಳಗಿನ ಎಂಜಲುಗಳನ್ನು ಒಗೆದು ಒಬ್ಬನಿನ್ನೊಬ್ಬನ ಮೇಲೆ ಎತ್ತಿಕಟ್ಟುತ್ತಿದ್ದಾಳೆ. ನಾನು ಹಣವು ಹೀನವೆಂದು ಉಚ್ಚ ಧ್ಯೇಯದೆಡೆಗೆ ಸಾಗಿದೆ. ಆದರೆ ಆ ಧ್ಯೇಯವೆಲ್ಲಿದೆ?

ಸಾಕಿದ ಚಿಗರಿಯು ಚಿನ್ನದ ಪಾತ್ರೆಯಲ್ಲಿಯ ನೀರನ್ನು ಬಿಟ್ಟು ಮೃಗಜಲದೆಡೆಗೆ ಧಾವಿಸಿದಂತೆ ನನ್ನ ಗತಿಯಾಗಲಿಕ್ಕಿಲ್ಲವೇ? ನಕ್ಷತ್ರವು ನೆಲಕ್ಕೆಬಿದ್ದೊಡನೆ ಕಲ್ಲಾಗಿ ಬಿಡುತ್ತಿದೆ. ಅದರಂತೆ ವ್ಯವಹಾರದಲ್ಲಿ ಬಂದ ಧ್ಯೇಯದ ತೇಜೋವಧೆಯಾಗುತ್ತಿರಬೇಕು.

ಸುಧಾಕರನ ಉದಾಸೀನ ಮುದ್ರೆಯ ಮೇಲಿಂದ ಇಂದು ವಿಶೇಷವೇನಾದರೂ ಸಂಭವಿಸಿರಬೇಕೆಂದು ಜಾನಕಿಯಮ್ಮನಿಗೆ ಅನಿಸಿತು. ಆದರೆ ಕಾದ ನೀರು ಆರಿದ ಮೇಲೆಯೇ ಕುಡಿಯಲು ಬರುತ್ತದೆಂಬುದನ್ನರಿತು ಅವಳು ಸುಮ್ಮನಾದಳು. ಒಂದು ಅಕ್ಷರವನ್ನೂ ಓದದೆ ಸುಧಾಕರನು ಇಂದು ಹಾಸಿಗೆಯ ಮೇಲೆ ಬಿದ್ದುಕೊಂಡಿದ್ದನು. ತಾಯಿಯು ಎಷ್ಟೋ ಹೊತ್ತಿನ ತನಕ ಪ್ರೀತಿಯಿಂದ ಮಗನ ತಲೆ ನೇವರಿಸುತ್ತ ಕುಳಿತಿದ್ದಳು. ತಾಯೊಡನೆ ಮನದಳಲನ್ನು ತೋಡಿಕೊಳ್ಳಬೇಕೆಂದು

ಸುಧಾಕರನು ಬಯಸಿದರೂ ಸಾಧ್ಯವಾಗಲಿಲ್ಲ ಶರೀರದ ನೋವು ತೋರಿಸುವುದಕ್ಕೆ ಬರುತ್ತದೆ. ಮನಸ್ಸಿನ ದುಃಖ ಹೇಳಿಕೊಳ್ಳಲು ಬರುತ್ತದೆ. ಆದರೆ ಆತ್ಮದ ದುಃಖ ಅವರೊಬ್ಬರಿಗೆ ಮಾತ್ರ ಗೊತ್ತಾಗುತ್ತದೆ.

ತನ್ನಿಂದ ತಾಯಿಗೆ ತೊಂದರೆಯಾಗಬಾರದೆಂದು ಸುಧಾಕರನು ಕಣ್ಣುಮುಚ್ಚಿದಂತೆ ನಟಿಸಿದನು ಇನ್ನು ನಿದ್ದೆಹತ್ತಬಹುದೆಂದು ತಾಯಿಯೂ ದೀಪ ಆರಿಸಿ ಹೊರಟುಹೋದಳು ಸುಮಾರು ಹೊತ್ತಿನ ಮೇಲೆ ಕಣ್ಣು ತೆರೆದು ನೋಡಿದ. ಆ ಕತ್ತಲೆಕೋಣೆಯಲ್ಲಿ ಮಿಂಚುಹುಳವೊಂದು ಮಿನುಗುತ್ತಿತ್ತು. "ನನ್ನ ಧ್ಯೇಯವೂ ಇದರಂತೆಯೇ ಅಲ್ಲವೇ?" ಎಂಬ ವಿಚಾರ ಆತನ ಮನಸ್ಸಿನಲ್ಲಿ ಬಂದಿತು. ಈ ಹುಳದ ಪ್ರಕಾಶದಿಂದ ನಾಲ್ಕು ಹೆಜ್ಜೆ ನಡೆಯುವದಾಗಲಿ ಒಂದು ಸಾಲು ಓದುವದಾಗಲಿ ಸಾಧ್ಯವಿಲ್ಲ. ಆದರೆ ಅದರ ಆಕರ್ಷಕ ಪ್ರಕಾಶದೆಡೆಗೆ ನೋಡಿದಷ್ಟು ಸಾಲದೆನಿಸುತ್ತದೆ. ಜಗತ್ತಿನಲ್ಲಿಯ ಉಚ್ಚ ಧ್ಯೇಯಗಳು ಈ ಮಿಂಚುಹುಳದಂತೆ ಬರೀ ಮಿಂಚಿ ಸುರುಳುಗೊಳಿಸಿ ಮಾಯವಾಗುವವಕ್ಕೇ ಜನ್ಮಿಸುತ್ತಿರಬಹುದು.

ಸುಧಾಕರನು ಕಣ್ಣುಮುಚ್ಚಿಕೊಂಡ ಅವನ ತೆರೆದ ಕಣ್ಣಿಗಿಂತ ಮುಚ್ಚಿದ ಕಣ್ಣಿಗೇ ಹಲವು ಸಾರೆ ಹೆಚ್ಚಿನ ಸಂಗತಿ ಕಾಣುತ್ತದೆ. ತನ್ನ ಹೃದಯ ಒಂದೇ ಸಮನೆ ಅಳುತ್ತಿರುವಂತೆ ಆತನಿಗೆ ಭಾಸವಾಯಿತು. ಅವಕ್ಕೆ ಆಕಾಶದೊಳಗಿನ ಚಂದ್ರ ಬೇಕಾಗಿದ್ದ ಆದರೆ ಅತ್ತು ಅತ್ತು ದಣಿದು ಜಗತ್ತಿನಲ್ಲಿಯ ಸಾದಾ ಆಟಿಗೆ ತೆಗೆದುಕೊಂಡು ಅಪಹತ್ತಿತು. ಒಮ್ಮಿಂದೊಮ್ಮೆಲೇ ಕಣ್ಣುತೆರೆದು ನೋಡಿದ. ಮಿಂಚುಹುಳ ಹೊರಟು ಹೋಗಿತ್ತು. ತನ್ನ ಧ್ಯೇಯವಾದರೂ ಹೀಗೆಯೇ ಮಿಂಚಿ ಮಾಯವಾಗಬಹುದೇ ಎಂಬ ಸಂದೇಹ ಸುಳಿದಿತು.

ಬೆಳಗ್ಗೆ ಸುಧೆಯು ಬಂದಳು. ದಿನದಂತೆ ಸುಧಾಕರನು ಎಚ್ಚತ್ತರೂ ವಿಶ್ರಾಂತಿಯಿಂದ ತೋರುವ ಉತ್ಸಾಹ ಆತನಲ್ಲಿ ಸ್ವಲ್ಪವೂ ಇರಲಿಲ್ಲ. ಬಿಸಿಲಿನ ತಾಪದಿಂದ ಬಳಲಿದ ಕಮಲದ ಮೊಗ್ಗೆಯಂತೆ ಅವನ ಮುಖ ತೋರುತ್ತಿತ್ತು.

"ಇಂದು ಮೈಯ್ಯಲ್ಲಿ ನೆಟ್ಟಗಿಲ್ಲವೇ?"

"ಯಾವುದು ನೆಟ್ಟಗೆ, ಯಾವುದು ಕೆಡುಕೆಂಬುದೇ ತಿಳಿಯದಾಗಿದೆ."

ಸುಧಾಕರನಿಂದ ಇಂತಹ ನಿರಾಶೆಯ ಮಾತನ್ನೆಂದೂ ಆಕೆ ಕೇಳಿರಲಿಲ್ಲ. ಅವಳು ಅಂಜಂಜುತ್ತ "ನಾನು ಕೇಳಿದರೆ ಕೋಪವಿಲ್ಲವಷ್ಟೇ?" ಎಂದಳು.

"ನನ್ನಂತಹ ಮನುಷ್ಯನು ಜಗತ್ತಿನ ಮೇಲೆ ಕೋಪ ಮಾಡುವವಕ್ಕಿಂತ ತನ್ನ ಮೇಲೆಯೇ ಮಾಡಿಕೊಳ್ಳುವುದು ಒಳಿತು."

"ನಿನ್ನೆ ಅಣ್ಣನೇನಾದರೂ ನಿಮಗೆ ಮಾತನಾಡಿದನೆಂದು ಕಾಣುತ್ತಿದೆ. ಅವನ ಮಾತು ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ಒಲೆಯೊಡನೆ ಸಂಬಂಧವಿದ್ದ ಮೇಲೆ ಒಮ್ಮೊಮ್ಮೆ ಕೈ ಸುಡತಕ್ಕದ್ದೇ."

"ಹೆರವರ ಮಾತಿಗೆ ನಾನೆಂದೂ ಪರಿವೆ ಮಾಡಿದವನಲ್ಲ. ಆದರೆ ನನ್ನ ಮಾತನ್ನು ನಡಿಸುವ ಯೋಗ್ಯತೆಯೂ ನನಗಿಲ್ಲವಾಯಿತು."

"ಹೆರವರ ಬಗ್ಗೆ ಇಲ್ಲದ ಹೆಸರಿಡುವ ಜನರ ಯೋಗ್ಯತೆಯನ್ನಾದರೂ ಅರಿಯಬಾರದೆ?"

ತಾನು ಏನೇನೋ ಮಾತನ್ನಾಡಿದನೆಂದು ಅನಿಸಿದ್ದರಿಂದ ಸುಧೆಯು ತಲೆಕೆಳಗೆ ಹಾಕಿ ಪುಸ್ತಕವನ್ನು ಮಗುಚಹತ್ತಿದಳು. ಸುಧಾಕರನು ಮನಸ್ಸಿನಲ್ಲಿಯೇ ಯೋಚಿಸಹತ್ತಿದ "ಚಳಿಯಿಂದ ನಡುಗುವವನಿಗೆ ಕಂಬಳಿಯ ಬೆಲೆ ಗೊತ್ತಾಗಬೇಕೇ ಹೊರತು ಎಲ್ಲರಿಗೂ ಗೊತ್ತಾಗುವ ಬಗೆ ಹೇಗೆ?" ತನ್ನ ಪ್ರಶ್ನೆಗೆ ಉತ್ತರ ಬರದಿರಲು, ಸುಧೆಯು—

"ಶಾಲೆ ಬಿಟ್ಟು ಬೇರೆ ಕಡೆಗೆ ಹೋಗುವ ವಿಚಾರವಿದೆಯೇ?" ಎಂದಳು.

"ಹೋಗಲೇ ಬೇಕು. ಪ್ರಕೃತಿಯ ಮೇಲೆ ಒಂದು ಔಷಧದ ಪರಿಣಾಮವಾಗದಿದ್ದರೆ ಇನ್ನೊಂದನ್ನು ತೆಗೆದುಕೊಳ್ಳಲೇಬೇಕು.

ಸುಧೆಯು ಏನೂ ಮಾತನಾಡಲಿಲ್ಲ. ಆದರೆ ಮೋರೆಯನ್ನು ಇನ್ನೊಂದು ಕಡೆ ತಿರುವಿದಳು. ಅವಳ ಮಾತಿನ ಒಲವು ಈಗ ಸುಧಾಕರನಿಗೆ ತಿಳಿಯಿತು. ತಾನು ಶಾಲೆಬಿಟ್ಟು ಹೋದರೆ ಅವಳ ಅಭ್ಯಾಸ ಸಂಪುಷ್ಟಕ್ಕೆ ಬರುವುದು ಖಂಡಿತವಾಗಿತ್ತು. ಯಾವ ಸುಧೆಯ ಕಣ್ಣಿನಿಂದ ಯಾವುದೇ ಕಾರಣದಿಂದಲೂ ನೀರಿಳಿಯಬಾರದೆಂದು ಸದಾಕಾಲವೂ ಯೋಚಿಸುತ್ತಿದ್ದನೋ ಈಗ ಅದೇ ಸುಧೆಯ ಕಣ್ಣೀರಿನಿಂದ ಅವನ ಹೃದಯಕ್ಕೆ ಸಮಾಧಾನವೆನಿಸಿತು. ಪ್ರೀತಿದೇವತೆಯು ತನ್ನ ಭಕ್ತರ ಕಣ್ಣೀರನ್ನು ಒರಸಲು ತತ್ಪರಳಿರುವಳಾದರೂ ಅವಳಿಗೆ ಅಶ್ರುವಿನ ನೈವೇದ್ಯವೇ ಹೆಚ್ಚಿಗೆ ಸೇರುತ್ತಿದ್ದೆ.

"ನಾನು ಈಹೊತ್ತೇ ಶಾಲೆ ಬಿಟ್ಟು ಹೋಗುವದಿಲ್ಲ. ಒಡ ಬಗ್ಗರಿಗೆ ಉತ್ತಮ ಶಿಕ್ಷಣ ಕೊಡಬೇಕೆಂದೇ ನಾನಿಲ್ಲಿಗೆ ಬಂದದ್ದು" ಸುಧೆಯ ಸಮಾಧಾನಕ್ಕಾಗಿ ಸುಧಾಕರನು ನುಡಿದ.

"ಒಂದು ವೇಳೆ ನಾನೂ ಕಲಿತವಳಿದ್ದರೆ ನಿಮಗೆ ಸ್ವಲ್ಪಮಟ್ಟಿಗಾದರೂ ಸಹಾಯವಾಗುತ್ತಿತ್ತು. ಆದರೆ ಬರೇ ಮಾತಿನಿಂದೇನು ಪ್ರಯೋಜನ? ಹಸಿಕಟ್ಟಿಗೆಯನ್ನು ಎಷ್ಟು ಊದಿದರೂ ಅಡಿಗೆ ಮಾಡಲಿಕ್ಕಾದೀತೇ?"

"ಈಗ ಕಲಿಯಲಿಕ್ಕೇನು ಅಡ್ಡಿ?"

"ನನಗಂತೂ ತುಂಬ ಉತ್ಸಾಹವಿದೆ. ನಾನು ಬಹಳ ಕಲಿಯಬೇಕು. ಚಿಕ್ಕ ಚಿಕ್ಕ ಹುಡುಗಿಯರಿಗೆ ಕಲಿಸಬೇಕು. ಯಮುನೆಯಂತಹ ಬಡವರ ಉಪಯೋಗಕ್ಕೆ ಬೀಳಬೇಕೆಂದು ಒಂದೇ ಸವನೆ ಅನಿಸುತ್ತಿದೆ. ಆದರೆ ಹೆಂಗುಸರ ಆಸೆಯೆಂದರೆ ಕಾಗದದ ನಾವೆ."

"ಈ ಕಾಗದದ ನಾವೆಯೇ ಒಂದು ವೇಳೆ ಉಗಿಹಡಗವಾಗಬಹುದು."

ಸುಧೆಯು ಕೃತಜ್ಞತೆಯಿಂದ ಆವನ ಕಡೆಗೆ ನೋಡಿದಳು. ಕಾಗದದ ನಾವೆಯನ್ನು ಉಗಿಹಡಗನ್ನಾಗಿ ಮಾರ್ಪಡಿಸುವ ಜಾದು ನಿಮಗೆ ಮಾತ್ರ ಸಾಧ್ಯವೆಂದು ಆಕೆ ಸೂಚಿಸಿದಳೋ ಏನೋ!

× × + × ×

ಸುಧಾಕರನು ಬರುವ ವೇಳೆಯಾದದ್ದನ್ನು ನೋಡಿ ವಾರುಣಿಯು ಇನ್ನೊಮ್ಮೆ ಕೂದಲಿನ ಮೇಲೆ ಹಣಿಗೆಯನ್ನೆಳಿಸು ಕನ್ನಡಿಯ ಮುಂದೆ ಹೋಗಿ ನಿಂತಳು. ಎಡಬದಿಯ ಕೂದಲು ಕೂತದ್ದು ಚನ್ನಾಗಿ ಸೇರದ್ದ ರಿಂದ ಅದನ್ನು ಬದಲಿಸುವ ಎತ್ತುಗಡೆ ಮಾಡಿದಳು. ಹಿಂದೆ ಹಾಕಿದ ಹೆಳಲು ಸರಿಯಾಗಿ ಗಟ್ಟಿಯಾಗಿದೆಯೋ ಇಲ್ಲವೋ ಎಂಬುದನ್ನು ಬಲ ಗೈಯಿಂದ ಒತ್ತಿ ಒತ್ತಿ ನೋಡಿದಳು. ಕುಂಕುಮ ಹಚ್ಚಿಕೊಂಡದ್ದು ಸ್ವಲ್ಪ ದೊಡ್ಡದಾಯಿತೆಂದು ಭಾಸವಾದೊಡನೆ ಅವಳು ತನ್ನ ಕುಶಾಗ್ರ ಬುದ್ಧಿಯಿಂದ ಅದನ್ನು ಸಾಧ್ಯವಿದ್ದಷ್ಟು ಸಣ್ಣದನ್ನಾಗಿ ಮಾಡಿದಳು. ಅಭ್ರಾಚ್ಛಾದಿತ ಆಕಾಶದ ಒಂದು ಬದಿಯ ಮೋಡವು ತುಸು ಸರಿದು ಅಲ್ಲಿ ತರಣಿಯ ಕಿರಣ ಚಕಚಕಿಸುವಂತೆ ಅವಳ ಬಲ ಹೆಗಲಿನ ಕೆಳ ಗಿನ ಶುಭ್ರ ಭಾಗವು ಕಾಣುತ್ತಿತ್ತು. ಪತ್ತಲದ ಸೆರಗು, ಕುಪ್ಪಸ, ಹಾಗೂ ಕೊರಳೊಳಗಿನ ಬೋರಿಸರಗಳೊಡನೆ ಅವಳು ಇನ್ನೂ ಎಷ್ಟೋ ಸಮಯ ಆಡುತ್ತಾ ಇದ್ದಳು. ಆದರೆ ಹೊರಗೆ ಯಾರದೋ ಕಾಲ ಸಪ್ಪಳ ವಾದುದರಿಂದ ಸುಧಾಕರನೇ ಬಂದಿರಬಹುದೆಂದು ಭಾವಿಸಿ ಅವಳು ಲಗುಬಗೆಯಿಂದ ತನ್ನ ಜಾಗೆಯ ಮೇಲೆ ಹೋಗಿ ಕುಳಿತು ಪುಸ್ತಕ ಮು ಗುಚಹತ್ತಿದಳು.

ಗಂಗಾಧರನು ಬಂದು ದೇಸಾಯಿ ಮಾಸ್ತರರು ಈ ಪತ್ರಿಕೆ ಕೊಟ್ಟಿ ದ್ದಾರೆಂದು ಹೇಳಿ ಕೊಟ್ಟು ಹೋದನು. ಅವಳು ಅದನ್ನು ತೆರೆದು ನೋ ಡಿದಳು ಕೆಂಪು ಮಸಿಯಿಂದ ಗುರ್ತುಮಾಡಿದ ಮಜಕೂರಿನ ಕಡೆಗೆ ಸ ಹಜವಾಗಿ ಅವಳ ಲಕ್ಷ್ಯಹೋಯಿತು. ಅದು ಅಗರಕರಸ್ಮೃತಿದಿನದ ಸುಧಾಕರನ ಭಾಷಣದ ಟೀಕೆಯಿತ್ತು. ವಾರುಣಿಯು ಆ ಪತ್ರಿಕೆಯನ್ನು ದೂರ ಎಸೆದು ವಿಚಾರ ಮಾಡಹತ್ತಿದಳು.

ಸುಧಾಕರನ ಆ ದಿನದ ಮೂರ್ತಿಯು ಅವಳ ನೆನಪಿಗೆ ಬಂದಿತು. ತೆಂಗಿನ ಗರಿಯ ಮೇಲೆ ಪಟಪಟ ಎಂದು ತಾಲಬದ್ಧವಾಗಿ ಸಪ್ಪಳ ಮಾಡುತ್ತ ಬರುವ ಮಳೆಯ ಧಾರೆಯಂತೆ ಭಾಸಿಸುವ ಅವನ ಅಸ್ಖಲಿತ ಸ್ಫೂರ್ತಿದಾಯಕ ವಾಣಿ, ಹೃದಯ ಉಕ್ಕಿ ಬಂದದ್ದರಿಂದ ಮುಖದ ಮೇಲೆ ಹೊಳೆಯುತ್ತಿರುವ ಲಹರಿಯ ನೊರೆಯಂತೆ ಕಾಣುವ ಹಣೆಯ

ಮೇಲಿನ ಬೆವರ ಹನಿ, ಅಜ್ಞಾನರೂಪಿ ಅಂಧಃಕಾರವನ್ನು ನಾಶಗೊಳಿ
ಸುವದಕ್ಕೋಸ್ಕರ ಹೊರಟದ್ದರಿಂದ ಅವನ ಸಾತ್ವಿಕ ಮುದ್ರೆಯ ಮೇಲೆ
ಪ್ರಕಾಶಿಸುವ ಬಾಲಸೂರ್ಯನ ಕೆಂಬಣ್ಣ—ಇವೆಲ್ಲವನ್ನು ಅವಳು ಇನ್ನೂ
ತನಕ ಮರೆತಿದ್ದಿಲ್ಲ. ವೇಗದಿಂದ ಹೋಗುವ ನಾವೆಯಂತೆ ಅವನು
ಮಾತನ್ನಾಡುತ್ತಿದ್ದನು. ಆ ನಾವೆಯ ವೇಗ ಇನ್ನೂ ಬೆಳೆಯಬೇಕೆಂತ
ಲೋ ಏನೋ ಅವನು ತನ್ನ ಬಲಗೈಯನ್ನು ಹುಟ್ಟಿನಂತೆ ನಡುನಡುವೆ
ಮೇಲೆ ಕೆಳಗೆ ಮಾಡುತ್ತಿದ್ದನು. ಅವನ ಭಾಷಣದಲ್ಲಿಯ ತತ್ವದ ದೃಷ್ಟಿ
ಯಿಂದಲ್ಲವಾದರೂ ಅದರಲ್ಲಿಯ ಆವೇಶ ಮತ್ತು ಸೌಂದರ್ಯದಿಂದ
ವಾರುಣಿಯ ಮನಸ್ಸಿನ ಮೇಲೆ ತುಂಬಾ ಪರಿಣಾಮವಾಗಿತ್ತು.

ಆ ಪ್ರೀತಿಯ ಭಾಷಣದ ಮೇಲೆ ಬಂದ ಟೀಕೆ ಆಕೆಗೆ ಸೇರಲಿಲ್ಲ.
ಇಷ್ಟೇ ಅಲ್ಲ, ಈಗೀಗಂತೂ ಸುಧಾಕರನ ವಿರುದ್ಧ ಯಾರಾದರೂ ಮಾತ
ನಾಡಿದರೆ ಅವಳಿಗೆ ಸಿಟ್ಟೇ ಬರುತ್ತಿತ್ತು. ಆ ದಿನ ರಾವಸಾಹೇಬ, ಮಧು
ಕರರ ಜೊತೆಗೆ ಹೋಗುವ ಇಚ್ಛೆ ಅವಳಿಗಿರಲಿಲ್ಲ. ಆದರೆ ತಂದೆಯ
ವಿರುದ್ಧ ಹೇಳುವ ಧೈರ್ಯ ಆಕೆಗೆ ಬರಲಿಲ್ಲ ದಾರಿಯುದ್ದಕ್ಕೂ ಕಾರಿನ
ಲ್ಲಿ ಮಧುಕರನು ಸುಧಾಕರನನ್ನು ಸಿಕ್ಕಂತೆ ಬಯ್ಯುತ್ತ, ಇಲ್ಲದ ಅಪವಾ
ದ ಹೊರಿಸುತ್ತ ಹೋಗಿದ್ದ. ತಾನು ಉತ್ತರ ಕೊಟ್ಟರೆ ಮಧುಕರನು ಇಲ್ಲ
ದ ಕಲ್ಪನೆಗಳನ್ನು ಮಾಡಬಹುದೆಂದು ಆಕೆ ಸುಮ್ಮನಿದ್ದಳು.

ಸಾವಂತವಾಡಿಯಿಂದ ಮರಳುವಾಗ ಮಧುಕರನು "ಬಡಿಗೆ ಕೂತ
ರೆ ಗಾಳಿ ಹತ್ತುತ್ತಿದೆ. ವಾರುಣಿ ನಡುವೆಯೇ ಕೂತರೆ ಒಳಿತೆ"ಂದು ಸೂಚಿ
ಸಿದ್ದರೂ ಆಕೆ ತನ್ನ ಜಾಗೆಯನ್ನು ಬಿಡಲಿಲ್ಲ. ಈಗೀಗ ಮಧುಕರನು
ಸಾಯಂಕಾಲ ವಾರುಣಿ, ರಾವಸಾಹೇಬರ ಜೊತೆಗೆ ನೇಮದಿಂದ ತಿರು
ಗಾಡುವದನ್ನು ತಪ್ಪಿಸುತ್ತಿದ್ದಿಲ್ಲ. ದಿನ್ನೆಯ ಮೇಲಿಂದ ಇಳಿಯುವಾಗ
"ಕಾಲು ಜಾರಿಬಿಟ್ಟಿತು." ಎಂದು ಹೇಳಿ ಮಧುಕರನು ವಾರುಣಿಗೆ ಕೈಕೊ
ಡಲು ಕೈ ಮುಂದೆ ಮಾಡುತ್ತಿದ್ದ. ಒಂದೆರಡು ಸಾರೆ ಜೋಲಿ ಹೋಗಬಹು
ದೆಂಬ ಭೀತಿಯಿಂದ ಅವಳು ಅವನ ಕೈ ಹಿಡಿದಿದ್ದಳು. ಆದರೆ ಅವನು
ಅದನ್ನು ಬಲುಗಟ್ಟಿಯಾಗಿ ಹಿಡಿದದ್ದರಿಂದ ಅವಳಿಗೆ "ಬಿದ್ದು ಪೆಟ್ಟಾದರೂ
ಪರವಾಯಿಲ್ಲ. ಆದರೆ ಅವನ ಸಹಾಯ ಬೇಡ" ಎಂದೆನಿಸಿ ಬಿಟ್ಟಿತ್ತು.

ಮಳೆಯ ಧಾರೆಯು ಸುರಿದು ಹೋದವೇಳೆ ಸೂರ್ಯ ಕಿರಣಗಳು ಪರಾವರ್ತನ ಹೊಂದಿ ಗಗನದಲ್ಲಿ ಸುಂದರ ಇಂದ್ರಧನುಸ್ಸು ಗೋಚರಿಸುವಂತೆ ಈ ವಿವಿಧ ಅನುಭವದ ನಂತರ ಇಂದು ವಾರುಣಿಯ ಮನಸ್ಸಿನಲ್ಲಿ ಒಂದು ಕಲ್ಪನಾಚಿತ್ರವು ನಿಂತುಬಿಟ್ಟಿತು. ಚಿಕ್ಕಂದಿನಲ್ಲಿಯೇ ಅವಳ ತಾಯಿ ತೀರಿಕೊಂಡಿದ್ದಳು. ಮುಂದೆ ಮನೆಯಲ್ಲಿ ಚಿಕ್ಕಮ್ಮ ಬಂದದ್ದರಿಂದ ಅವಳಿಗೆ ಯಾವ ಕೊರತೆಯಾಗಲಿಲ್ಲವೆಂಬುದು ನಿಜವಾದರೂ ಚಿಕ್ಕಮ್ಮ ಮತ್ತು ರಾವಸಾಹೇಬರ ಅನಿಷ್ಟ ಆಕರ್ಷಣದ ಮೂಲಕ ಅವಳ ಜೀವಿತಕ್ಕೆ ಒಂದು ಬಗೆಯ ಕೆಟ್ಟಸಂಸ್ಕಾರ ಹತ್ತುಬಿಟ್ಟಿತು. ರಾವಸಾಹೇಬರಿಗ "ಓಲ್ಡ ಫ್ಲೋಕ್ಸ" ಸಾಹೇಬರ ಮಾತು ವೇದವಾಕ್ಯವೆನಿಸಿದ್ದರಿಂದ ಅವಳ ಮದುವೆಯನ್ನು ಬೇಗ ಮಾಡಬಾರದೆಂದು ನಿಶ್ಚಯಿಸಿದ್ದರು ಕಸ್ಬದಲ್ಲಿಯ ನೌಕರಿಯ ಮೂಲಕ ಹಲವು ಸಾರೆ ಹಳ್ಳಿಯಲ್ಲಿಯೇ ಇರಬೇಕಾದ್ದರಿಂದ ವಾರುಣಿಯ ಶಿಕ್ಷಣವು ಬೇಕಾದಂತೆ ಸಾಗದಿದ್ದರೂ ರಾವಸಾಹೇಬರು ಅವಳ ಕಡೆ ದುರ್ಲಕ್ಷ್ಯ ಮಾಡುತ್ತಿದ್ದರೆಂದು ಹೇಳಲು ಬರುವಂತಿಲ್ಲ ಆದರೆ ಹೇಗಾದರೂ ಹಣಗಳಿಸುವದು —ತಿಂದುಂಡು ಚೈನಿ ಹೊಡೆಯುವದು- ಆ ಹಣಧಿಂದ ಬೆರಿಸ್ಟರ ಇಲ್ಲವೆ ಆಯ್.ಸಿ.ಎಸ್. ಅಳಿಯನನ್ನು ದೊರಕಿಸುವದು- ಇವುಗಳನ್ನು ಬಿಟ್ಟು ಇನ್ನಾವ ಇಚ್ಛೆಯೂ ಇಲ್ಲದ ಆ ರಾವಸಾಹೇಬರ ಕೈಕೆಳಗೆ ಹಗಲಿರುಳು ಬೆಳೆದ ವಾರುಣಿಗೆ ಬರೇ ಪುಸ್ತಕೀ ಶಿಕ್ಷಣದೊರೆತರೂ ಅವಳ ಮಾನಸಿಕ ಗುಣಗಳ ವಿಕಾಸ ಹೇಗಾಗಬೇಕು? ವಸ್ತ್ರಾಲಂಕಾರಗಳಲ್ಲಿ- ಕೇಶ ರಚನೆಯಲ್ಲಿ- ಒನಪು ಒಯ್ಯಾರಗಳಲ್ಲಿ ಸುಖವೆನಿಸಹತ್ತಿದ ಹುಡುಗಿಯ ಹೃದಯದಲ್ಲಿ ಉಚ್ಚಭಾವನೆ ಪ್ರಕಟವಾಗುವದೆಂತು? ಸಿರಿವಂತಿಕೆಯ ಹೊಗೆಯು ಕಣ್ಣಿಗೆ ಹತ್ತುವದಲ್ಲದೆ ಅದು ಕಣ್ಣಿನ ಮಾರ್ಗವಾಗಿ ಒಳಗೆ ಹೋಗಿ ಹೃದಯದ ಉಸಿರುಗಟ್ಟಿಸುತ್ತಿದೆ. ತನ್ನ ಮನೆಬಿಟ್ಟು ಜಗತ್ತು ಇಲ್ಲ, ತನ್ನ ವಿಲಾಸದ ಹೊರತು ಧ್ಯೇಯವಿಲ್ಲ, ಜಗತ್ತಿನಲ್ಲಿ ಹಣಕ್ಕಿಂತ ಇನ್ನಾವ ಗುಣಕ್ಕೂ ಬೆಲೆಯಿಲ್ಲ ಎಂಬ ಸಂಸ್ಕಾರದಲ್ಲಿಯೇ ಚಿಕ್ಕಂದಿನಿಂದಲೂ ಬೆಳೆದು ಬಂದುದರಿಂದ ಸರಳವೃತ್ತಿಯ, ಪರೋಪಕಾರದ, ಹಾಗೂ ಹಣಕ್ಕಿಂತ ಗುಣಕ್ಕೇ ಮಾನಕೊಡುವ ಕಲ್ಪನೆ ವಾರುಣಿಯ ಮನಸ್ಸಿನಲ್ಲಿ

ತೀವ್ರವಾಗಿ ಎಂದೂ ಉದ್ಭವಿಸಿದ್ದಿಲ್ಲ. ಬೆಳಿಗ್ಗೆ ಎದ್ದೊಡನೆ ರಾವಸಾಹೇಬರು 'ಇಂದು ಈ ಪಲ್ಯಾ ಮಾಡಬೇಕು. ಆ ಪದಾರ್ಥ ಮಾಡಬೇಕು..' ಎನ್ನುತ್ತಿದ್ದರು. ಸಾಯಂಕಾಲ ಆಫೀಸಿನಿಂದ ಬಂದ ಮೇಲೆ ಯಾರಾದರೊಬ್ಬರಿಂದ ಹಣ ಎತ್ತಿದ ಸಂಗತಿಯನ್ನು ಅವರು ರಭಸವಾಗಿ ವರ್ಣಿಸುತ್ತಿದ್ದರು. ರಾತ್ರಿಯಾಗಲು ಹಾಸಿಗೆಯ ಮೇಲೆ ವಾರುಣಿಯು ಒಬ್ಬಳೇ ತಂದೆ ಹಾಗೂ ಚಿಕ್ಕಮ್ಮನವರ ವಿಷಯದಲ್ಲಿ ವಿಚಾರ ಮಾಡಿ ಬೇಸರ ಬರಲು ಯಾವುದಾದರೊಂದು ಒಳಿತೋ ಕೆಡುಕೋ ಕಾದಂಬರಿಯನ್ನು ಓದುತ್ತ ನುಲಗಿಬಿಡುತ್ತಿದ್ದಳು. ಅವಳು ಎಂತಹ ಪುಸ್ತಕ ತರುತ್ತಾಳೆಂಬುದನ್ನು ವಿಚಾರಿಸುವ ಅಗತ್ಯ ರಾವಸಾಹೇಬರಿಗೆ ಎಂದೂ ಬೀಳುತ್ತಿರಲಿಲ್ಲ. ಪ್ರಫುಲ್ಲಿತವಾಗುವ ಕಮಲದಂತೆ ದಿನದಿನಕ್ಕೂ ಅಧಿಕ ಸುಂದರವಾಗಿ ತೋರುವ ವಾರುಣಿಯ ರೂಪ, ಹಾಗೂ ತನ್ನ ಹೆಸರಿನಿಂದ ಬ್ಯಾಂಕಿನಲ್ಲಿರುವ ಹಣ ಇವುಗಳ ಬಲದಿಂದ ಬೇಕಾದಂಥ ಅಳಿಯನನ್ನು ಪೂರಕಿಸುವೆನೆಂಬ ಹೆಮ್ಮೆ ಅವರಿಗಿತ್ತು. ವಾರುಣಿಗೆ ಯಾವ ಜರಿಯ ಪತ್ತಲ ಶೋಭಿಸಬಹುದು ಎಂಬುದರ ಹೊರತು ಅವರಿಗೆ ಅವಳ ಬಗ್ಗೆ ಇನ್ನಾವ ವಿಚಾರವೂ ಬರುತ್ತಿದ್ದಿಲ್ಲ.

ಸುಧಾಕರನ ಪ್ರಥಮ ಭೆಟ್ಟಿಯಾದಾಗ ತಾನು ಏನೋ ಹೊಸತಾದ ಸಂಗತಿ ಕಂಡಂತೆ ಅನುಭವವಾಗಹತ್ತಿತು. ಕತ್ತಲೆ ಕೋಣೆಯಲ್ಲಿ ಬಂಧಿಸಿಟ್ಟ ಮನುಷ್ಯನಿಗೆ ಸೂರ್ಯ ಕಿರಣದ ದರ್ಶನವಾದಂತೆ ಅನಿಸಿತು. ಸ್ವರೂಪ ಸಂಪತ್ತಿಗಿಂತ ಮನಸ್ಸಿನ ಉದಾರತೆ, ವೈಸೋಲಿನ-ಅಪೂರ್ವ ಪೋಷಾಕಿಗಿಂತ ಪರೋಪಕಾರದ ಪ್ರವೃತ್ತಿ, ಚಿನ್ನಾಭರಣಕ್ಕಿಂತ ಉಚ್ಚ ಭಾವನೆ ಇವು ನಿಸ್ಸಂದೇಹವಾಗಿ ಶ್ರೇಷ್ಠವಾದುದೆಂದು ಅವಳಿಗೆ ತೋರಿತು. ಪ್ರವಾಸದಲ್ಲಿ ಯುವಕನಿಗೆ ಸಹಾಯ ಮಾಡುವದರಲ್ಲಿ ಸುಧಾಕರನು ತೋರಿಸಿದ ತತ್ಪರತೆಯ ಬಗ್ಗೆ ಅವಳಿಗೆ ಆದರ ಉಂಟಾಯಿತು. ಪಕ್ವಾನ್ನ ತಿನ್ನುವುದು-ಜರಿಯ ಪತ್ತಲ ಉಡುವುದು, ಕಾದಂಬರಿ ಓದುವುದು ಇವುಗಳಿಂದ ದೊರಕುವ ಆನಂದಕ್ಕಿಂತ ಜಗತ್ತಿನಲ್ಲಿ ಬೇರೊಂದು ಉಚ್ಚತರ ಗತಿಯ ಆನಂದವಿದೆಯೆಂದು ಅವಳಿಗೆ ಭಾಸವಾಯಿತು.

ಮಧುಕರನ ಕವಿತೆಗಿಂತ ಸುಧಾಕರನ ಕಳಕಳಿಯು ಕಲಿಸುವಿಕೆಯಲ್ಲಿ ಅಧಿಕ ಕಾವ್ಯವಿದೆಯೆಂದು ಆವಳ ಅನುಭವಕ್ಕೆ ಬಂದಿತು. ರಾವಸಾಹೇಬರ ಆಯ್.ಸಿ.ಎಸ್. ಗಂಡನ ಮಾತು ಮತ್ತು ಮಧುಕರನ ಅಧಿಕ ಪ್ರಸಂಗತನಗಳಲ್ಲಿ ಮೊದಲು ಅವಳಿಗೆ ಉಂಟಾಗುತ್ತಿದ್ದ ಆನಂದ ಮೆಲ್ಲ ಮೆಲ್ಲನೆ ಅಳಿದು ಹೋಗಹತ್ತಿತು. ಈ ರೀತಿ ಅವಳ ಮನಸ್ಸಿನಲ್ಲಿ ಕ್ರಮೇಣ ಬದಲಾಗುತ್ತ ಬಂದದ್ದರಿಂದಲೇ ಅವಳಿಗೆ ಸುಧಾಕರನ ಭಾಷಣದ ವೇಳಿನ ಆ ಟೀಕೆಯು ಸರಿಯೆನಿಸಲಿಲ್ಲ.

ಈ ರೀತಿ ವಿಚಾರದಲ್ಲಿರುವಾಗಲೇ ಸುಧಾಕರನ ಆಗಮನವಾಯಿತು.

"ಇಂದು ತಮಗೆ ಬರಲು ತಡವಾಯಿತಲ್ಲವೇ?"

"ಹುಂ, ಅಮ್ಮನ ಕಾಲು ವಾತದಿಂದ ಹಿಡಿದು ಬಿಟ್ಟಿದೆ. ಮಳೆಗಾಲವೆಲ್ಲ ಹೀಗೆಯೇ!"

"ಹಾಗಾದರೆ ನಮ್ಮಲ್ಲಿಯೇ ಊಟಕ್ಕೆ ಇದ್ದು ಬಿಡಿ."

"ಅಂತಹ ಪ್ರಸಂಗ ಬಂದರೆ ವಾರದಲ್ಲಿ ಒಂದೂಟಕ್ಕಾದರೂ ಬರಬಹುದು."

"ಅಲ್ಲಿಯೇ ಸುಧಾಕರನ ಟೀಕೆ ಬಂದ ಪತ್ರಿಕೆ ಬಿದ್ದಿತ್ತು. ಅದರೆಡೆಗೆ ಸುಧಾಕರನ ದೃಷ್ಟಿಹೋಗಲು ವಾರುಣಿಯು ನಡುವೆಯೇ—

"ಇದರಲ್ಲಿಯ ಟೀಕೆ ಓದಿರುವಿರಾ?"

"ಅಹುದು, ಓದಿರುವೆ."

"ಅದನ್ನಾರು ಬರೆದಿರಬಹುದು?"

"ನಾನು ಮಾತ್ರ ಬರೆದಿಲ್ಲವೆಂದು ಹೇಳಬಲ್ಲೆ."

"ನಾನು ಹೇಳಿದರೆ ಏನು ಕೊಡುವಿರಿ?"

"ಚಾದಿ ಪತ್ತಲ."

"ದಮ್ಮಯ್ಯ! ಅದೊಂದು ಬೇಡ. ನಾನೇ ನಿಮಗೆ ಚಹಾ ಕೊಡುವೆ."

ತನ್ನ ಟೀಕೆ ಬರೆದವರ್‍ಯಾರಿರಬಹುದೆಂಬದನ್ನು ಅರಿತುಕೊಳ್ಳುವದಕ್ಕಾಗಿ ಚಹದ ಕರಾರಿಗೆ ಒಪ್ಪಿದ.

"ಇದನ್ನು ಮಧುಕರ ಬರೆದದ್ದು. ಕೊನೆಯಲ್ಲಿ ಎಮ್ ಇದೆ."

"ಎಮ್ ಇದ್ದರೆ ಮಧುಕರನೇ ಹೇಗೆ? ನನಗೂ ಅವನಿಗೂ ಯಾವ ದ್ವೇಷವೂ ಇಲ್ಲ. ಆತನೇಕೆ ಬರೆದಾನು?"

ಆದರೆ ಸುಧಾಕರನ ಬಗ್ಗೆ ಮಧುಕರನು ಪಡುವ ಅಭಿಪ್ರಾಯ ಆಕೆಗೆ ಗೊತ್ತಿತ್ತು. ಅದರಿಂದ ಸುಧಾಕರನ ವಿಶಾಲ ಅಂತಃಕರಣದ ಪರಿಚಯ ಅವಳಿಗಾಯಿತು.

"ನಿನ್ನೆ ನಾನು ತೋರಿಸಿದ ಪತ್ರ ಓದಿರುವಿರಲ್ಲವೇ?"

"ಮನೆಯಿದ್ದಲ್ಲಿ ಕಸ ಇರತಕ್ಕದ್ದೆ. ಇಂತಹ ಪತ್ರದ ಕಡೆಗೆ ನಾವು ಹೆಚ್ಚಿಗೆ ಲಕ್ಷ್ಯ ಕೊಡಬಾರದು."

"ಹಾಗಾದರೆ ಅಪ್ಪನಿಗೆ ಹೇಳಲೇ?"

ಆ ಪತ್ರದಲ್ಲಿಯ ಅಕ್ಷರ ಜಗನ್ನಾಥನದೆಂದು ಕಂಡುಬಂದದ್ದರಿಂದ ಸುಧಾಕರನು ಅದನ್ನು ಹರಿದು ಚಲ್ಲಿದ್ದ. ರಾವಸಾಹೇಬರ ಕಿವಿಗೆ ಈ ಸುದ್ದಿ ಬಿದ್ದರೆ ಪ್ರಕರಣ ದೊಡ್ಡದಾಗಬಹುದೆಂದು ಸುಧಾಕರನೆಂದ--

"ಸುಮ್ಮನೇ ಏಕೆ ಹೇಳುವುದು? ಕಣ್ಣಿನಲ್ಲಿ ಧೂಳಿನ ಕಣಬಿದ್ದರೆ ಶಸ್ತ್ರ ಕ್ರಿಯೆ ಮಾಡುತ್ತಾರೆಯೆ?"

ಆಕೆ ಚಹಾ ತರುವದಕ್ಕೆಂದು ಹೊರಟಿದ್ದಳು. ನಡುವೆಯೇ ಏನೋ ನೆನಪಾದ್ದರಿಂದ ತಿರುಗಿ ಬಂದಳು.

"ನಮಗೆ ಕನಸು ಏಕೆ ಬೀಳುತ್ತಿದೆ?"

"ಮನಸ್ಸಿನಲ್ಲಿ ಇದ್ದದ್ದು ಕನಸಿನಲ್ಲಿ ಕಾಣುತ್ತದೆಂದು ಹೇಳುತ್ತಾರೆ."

"ನಿನ್ನೆ ರಾತ್ರಿ ಯಾವ ಕನಸು ಬಿತ್ತೆಂದು ನಿಮಗೆ ಗೊತ್ತೇ?"

"ನಿಮಗೆ ಬಿದ್ದ ಕನಸು ನನಗೆ ಹೇಗೆ ಗೊತ್ತಾಗಬೇಕು?"

"ಕನಸಿನಲ್ಲಿ ಸ್ವತಃ ನೀವೇ ಬಂದರೂ ನಿಮಗೆ ಗೊತ್ತಿಲ್ಲವೇ?"

ಸುಧಾಕರನು ವಾರುಣಿಯ ಕಡೆಗೆ ನೋಡಿದ. ಅವಳ ಗಲ್ಲ ಕೊಂಚ ಕೆಂಪಾಗಿ ಹಣೆಯ ಮೇಲೆ ಬೆವರ ಹನಿ ಹೊಳೆಯಹತ್ತಿತ್ತು. ಕನಸ್ಸೆಂದರೆ ಭವಿಷ್ಯ ಕಥನವೆಂದೆನಿಸಿ ಸುಧಾಕರನು ಕನಸಿನ ವಿವರ ಕೇಳಿದನು.

"ನಾವಿಬ್ಬರೂ ಎತ್ತರವಾದ ಗುಡ್ಡದಮೇಲೆ ಆಡ್ಡಾಡುವದಕ್ಕೆ ಹೋದೆವು."

"ದಿನಾಲು ನೀವು-ಮಧುಕರ ಅಡ್ಡಾಡಲು ಹೋಗುತ್ತಿರುವುದರಿಂದ ಹಾಗೆ ಕನಸು ಬಿದ್ದಿರಬಹುದು.'

"ಆದರೆ ಕನಸಿನಲ್ಲಿ ಮಧುಕರ ಸಂಗಡವಿರಲಿಲ್ಲ. ನೀವೇ ಇದ್ದದ್ದು."

"ಇರಲಿ ಆಗ ಏನು ನಡೆಯಿತು?"

ಕನಸಿನಲ್ಲಿ ನಾನೆಂದೆ- "ಈ ಶಿಖರದ ಮೇಲಿಂದ ನಾವು ಗಗನಕ್ಕೆ ಹೋಗೋಣ ಅಲ್ಲಿಯ ತಾರೆಗಳನ್ನಾಯ್ದು ನಿಮಗಾಗಿ ಗುಚ್ಛವನ್ನು ತಯಾರಿಸಿ ಕೊಡುವೆನು. ಹಾಗೂ ಮಿಂಚಿನ ದಾರದಲ್ಲಿ ತಾರಾಕುಸುಮಗಳನ್ನು ಪೋಣಿಸಿ ನಾನು ಮುಡಿಯುವೆ."

"ಆ ಮೇಲೆ ನಾನೂ ಮೇಲಕ್ಕಡರಿದೆನೇ?"

"ಇಲ್ಲ, ನೀವು ಕೆಳಗೆ ಬೊಟ್ಟುಮಾಡಿ ತೋರಿಸಿದಿರಿ. ಕೆಳಗೆ ವಿಸ್ತೀರ್ಣವಾಗಿ ಪಸರಿಸಿಕೊಂಡ ಸಮುದ್ರದಲ್ಲಿ ಎಷ್ಟೋ ಮಂದಿ ಮುಳುಗಿ ಹೋಗುತ್ತಿದ್ದರು. ನೀವು ನನ್ನನ್ನು ಬದಿಗೆ ದೂಡಿ ಒಮ್ಮೆಲೆ ಕೆಳಗೆ ಹಾರಿಬಿಟ್ಟಿರಿ. ನಾನು ಚೀರುತ್ತಾ ಎದ್ದೆ."

"ಕನಸೆಂದರೆ ಜಾದು ಆಟ. ಅದು ಮಿಥ್ಯೆಯೆಂದು ಭಾವಿಸಬೇಕು."

ವಾರುಣಿಯು ಚಹಾತರಲು ಒಳ ಹೋದಳು. ಸುಧಾಕರನು ಈ ಎಲ್ಲ ಸಂಗತಿಗಳ ಬಗ್ಗೆ ವಿಚಾರ ಮಾಡಹತ್ತಿದನು.

"ವಾರುಣಿಯು ಹುಟ್ಟು ದುಷ್ಟಳಲ್ಲ. ಆದರೆ ಬೆಳೆದ ವಾತಾವರಣ ಅಂತಹದು. ಚಿಕ್ಕಂದಿನಲ್ಲಿ ಬೆಳ್ಳಿಯ ಬಟ್ಟಲದಿಂದಲೇ ಹಾಲು ಕುಡಿದಿದ್ದಳು. ಬಾಲ್ಯದಲ್ಲಿ ಆಳುಗಳ ಸೊಂಟದ ಮೇಲೆ ಕುಳಿತು ತಿರುಗಾಡಿದಳು. ಮುಗ್ಧಾವಸ್ಥೆಯಲ್ಲಿ ಜರಿವಸ್ತ್ರ ಮತ್ತು ಚಿನ್ನದಾಭರಣಗಳು ಅವಳ ಸೇವೆಗೆ ಸಿದ್ಧವಾಗಿ ಬಂದವು. ಇಂತಹ ಸ್ಥಿತಿಯಲ್ಲಿ ಬೆಳೆದ ಮಗುವಿಗೆ ಬಡತನ, ಅದರಿಂದಾಗುವ ತೊಂದರೆಗಳ ಕಲ್ಪನೆ ಹೇಗೆ ತಾನೇ ಬಂದೀತು? ಕಾಳೆಯಂತಹ ಶ್ರೀಮಂತ ಗಿರಣಿ ಮಾಲಕನಿಗೇ ವಾರುಣಿಯಂತಹ ಪತ್ನಿ ಯೋಗ್ಯ."

ವಾರುಣಿಯು ಚಹಾ ತಂದಳು. ಸುಧಾಕರನು ನಿರಪೇಕ್ಷಭಾವದಿಂದ ಅವಳ ಕಡೆಗೆ ನೋಡಹತ್ತಿದನು. ಯಮುನಾನದಿಯು ತನ್ನ ಕೇಶಕಲಾಪವನ್ನು-ಮಿಂಚು ವೈಕಾಂತಿಯನ್ನು-ಅರಳಿದ ಲತಿಕೆಯು ತನ್ನ ಶರೀರ ಸೌಷ್ಠವವನ್ನು ಅವಳಿಗೆ ಕೊಟ್ಟಿರಬಹುದು. ಅವಳ ರೂಹಿನಲ್ಲಿ ವಿಲಕ್ಷಣ ಆಕರ್ಷಣ ಶಕ್ತಿಯಿತ್ತೆಂಬುದಕ್ಕೆ ಸಂದೇಹವಿಲ್ಲ. ಸುಧಾಕರನ ಕೈಯೊಳಗೆ ಪೇಲೆ ಕೊಡುವಾಗ ಅವಳು ಒಂದು ಬಗೆಯ ನಗು ಬೀರಿದ್ದರಿಂದ ಅದರ ಕಾರಣ ತಿಳಿಯದಿದ್ದರೂ ಸುಧಾಕರನ ಮುದ್ರೆಯ ಮೇಲೆ ನಸುನಗೆಯು ನುಸುಳಿತು. ಪೇಲೆಯನ್ನು ತಿರುಗಿ ತೆಗೆದುಕೊಳ್ಳುವಾಗ ಅರಿತೋ ಅರಿಯದೆಯೋ ಅವಳ ಕೈ ಸ್ಪರ್ಶವಾಯಿತು. ಸತಾರಿನ ತಂತಿಯ ಮೇಲೆ ಯಾರಾದರೂ ಅರಿಯದೆಯೇ ಬೆರಳಿಟ್ಟರೂ ಅದು ಕಂಪಿಸುವಂತೆ ಅವನ ಶರೀರವು ನಡುಗಿತು. ವಾರುಣಿಗೆ ಕಲಿಸುವಾಗ ಅವನ ಮನಸ್ಸು ಒಂದೇ ಸವನೆ ಸುಧೆ ಮತ್ತು ವಾರುಣಿಯರ ತರತರದ ಚಿತ್ರಗಳನ್ನು ಚಿತ್ರಿಸುವುದರಲ್ಲಿಯೇ ವ್ಯಾಪೃತವಾಗಿಬಿಟ್ಟಿತ್ತು. ಮನಸ್ಸಿನಲ್ಲಿಯ ಈ ತುಮುಲದ ಮೂಲಕ ಅವನಿಗೆ ಏನೂ ಸೂಚಿಸದಾಯಿತು. ಜೀವಕ್ಕೆ ಒಂದು ಬಗೆಯ ಕಾತರ ಉಂಟಾಯಿತು. ಅಮ್ಮನೊಡನೆ ಮನಬಿಚ್ಚಿ ಎಲ್ಲ ಸಂಗತಿ ಹೇಳಿಬಿಡಬೇಕೆಂದು ನಿಶ್ಚಯಿಸಿ ಅವನು ಮನೆಗೆ ಹೋದೊಡನೆಯೇ ಜಾನಕಿಯಮ್ಮನವರು ಹೇಳಿದರು —

"ಸುಧಾ, ಆಗ ಗೋಪಾಳರಾಯರು ಬಂದಿದ್ದರು. ತಮ್ಮ ತಂಗಿಯನ್ನು ತೋರಿಸಲು ಸಂಜೆ ಬರುವವರಿದ್ದಾರೆ."

"ಅಂತೂ ಒಂದು ಬಿಕ್ಕಟ್ಟು ಬಂತು." ಎಂದು ತನ್ನಷ್ಟಕ್ಕೇ ನಕ್ಕು ನುಡಿದ.



# ಪ್ರಕರಣ ೨೨.

ಸಂಜೆ ಭಾವೀ ವಧುವನ್ನು ನೋಡುವ ಕುತೂಹಲವಂತೂ ಆತನಿಗೆ ಇದ್ದಿಲ್ಲ. ಅಲ್ಲದೆ ಈ ಸಂಕಟದಿಂದೊಮ್ಮೆ ಪಾರಾದರೆ ಸಾಕೆನಿಸಿತ್ತು. ಕ್ಷಣಾರ್ಧದಲ್ಲಿ ಎಲ್ಲಿಯದೋ ಹೆಣ್ಣು ಗಂಡುಗಳನ್ನು ಆಜೀವನ ಒಂದೆಡೆಯಲ್ಲಿ ಕೂಡಹಾಕುವ ಇಂದಿನ ಮದುವೆಗೆ ಆತನ ಮನಸ್ಸು ಒಪ್ಪುತ್ತಿರಲಿಲ್ಲ. ನಮ್ಮ ಸಮಾಜದಲ್ಲಿ ನಡೆಯುವ ಮದುವೆ ಎರಡು ಹೃದಯಗಳ ಮಿಲನದಿಂದ ಆಗುತ್ತಿಲ್ಲ, ಹೆಚ್ಚೆಂದರೆ ಹೆಣ್ಣಿನ ಬಣ್ಣ ಇಲ್ಲವೆ ಅವಳ ಒನಪು ಒಯ್ಯಾರ ಗಂಡುಸಿನ ಕಣ್ಣಿನೊಡನೆ ಲಗ್ನವಾಗುತ್ತಿದೆ. ಮಾವನೊಡನೆ ಹಣವಿದ್ದರೆ ಹೆಂಗುಸಿಗೊಂದು ಸರ್ಟಿಫಿಕೇಟು ಇದ್ದಂತೆ. ಇಂತಹ ದಂಪತಿಗಳಿಂದ ಉಚ್ಚ ಮಹತ್ವಾಕಾಂಕ್ಷೆ, ಸಮಾಜಸೇವೆ, ಅಥವಾ ದಿವ್ಯ ಪ್ರೇಮವನ್ನು ಅಪೇಕ್ಷಿಸುವದೆಂತು?

ಮಗುವು ಬೆಳೆದು ಹದಿನೈದು ವರುಷಗಳಾಗುವ ವರೆಗೆ ಮದುವೆಯೆಂಬುದು ಒಂದು ಆಟವೆಂದೆನಿಸುತ್ತದೆ. ಹದಿನೈದರಿಂದ ಇಪ್ಪತ್ತರ ವರೆಗೆ ಪ್ರತಿಯೊಬ್ಬ ವಿದ್ಯಾರ್ಥಿಯು ಆಮರಣ ಬ್ರಹ್ಮಚರ್ಯದಿಂದಿದ್ದು ದೇಶ ಸೇವೆಮಾಡುವ ವಿಚಾರ ಮಾತನಾಡುತ್ತಿರುತ್ತಾನೆ. ಮುಂದೆ ಇಪ್ಪತ್ತು ಇಪ್ಪತ್ತೈದರ ವರೆಗಿನ ವಯಸ್ಸಿನಲ್ಲಿ ಹೆಣ್ಣನ್ನು ಕಂಡೊಡನೆ ಆತನ ತತ್ವಗಳೆಲ್ಲ ಗಾಳಿಗೋಪುರವಾಗುತ್ತಿದೆ. ಮತ್ತು ಇಪ್ಪತ್ತೈದು ವರ್ಷಗಳಾದ ಮೇಲೆ ಬೇಗನೆ ಯಾವುದಾದರೊಂದು ದಿನ ಗೋರಜಮುಹೂರ್ತದಲ್ಲಿ ಜನರು ತನ್ನ ಮೇಲೆ ಅಕ್ಷತೆ ಒಗೆಯುತ್ತಿರುವಂತೆಯೂ, ತನ್ನ ಹೃದಯ ತನ್ನ ವಶದಲ್ಲಿರದೆ ಅಂತಃಪಟದಾಚೆ ಏನನ್ನೋ ಶೋಧಿಸುತ್ತಿರುವಂತೆಯೂ ಕನಸು ಕಾಣುತ್ತಾನೆ. ಇಂದಿನವರೆಗೆ ಶಾರೀರಿಕ ನ್ಯೂನತೆಯಿಂದಲೋ ಬಡತನದ ಮೂಲಕವೋ ಅವಿವಾಹಿತರಾಗಿರುವವರನ್ನು ಬಿಟ್ಟರೆ ಉಳಿದವರಲ್ಲಿ ಉಚ್ಚಧ್ಯೇಯಕ್ಕೋಸ್ಕರ- ತತ್ವಕ್ಕೋಸ್ಕರ- ಅವಿವಾಹಿತರಾಗಿರುವವರು ಎಷ್ಟು ಮಂದಿ? ಪ್ರತಿಯೊಂದು ಶತಮಾನಕ್ಕೆ ಒಬ್ಬ ರಾಮದಾಸ ಅಥವಾ ಒಬ್ಬ ವಿವೇಕಾನಂದ ಹುಟ್ಟುತ್ತಿರಬಹುದು.

ಆದರೆ ಅವರ ಬುದ್ಧಿ, ಭಾವನೆ, ಧೈರ್ಯಗಳನ್ನು ಸರಿಗಟ್ಟುವವರು ಅನೇಕರಿದ್ದರೂ ಅವರಂತೆ ಬ್ರಹ್ಮಚರ್ಯದಲ್ಲಿದ್ದವರು ಕೆಲವರೇ.

ಆದರೂ ಸಾವಿರಾರು ಪ್ರಸಿದ್ಧ ಪುರುಷರು ವಿವಾಹವಾಗಿದ್ದರೂ ಮಾನವ ಕಲ್ಯಾಣಕ್ಕಾಗಿ ಹೆಣಗಿದ್ದಾರೆ. ಕೇವಲ ಉಪಭೋಗಕ್ಕಾಗಿ ಲಗ್ನವಾಗುವುದು ಹೀನತರದ ಸ್ವಾರ್ಥ. ವಿಷಯ ಸುಖದ ನೆಲಗಟ್ಟಿನ ಮೇಲೆ ನಿಲ್ಲಿಸಿದ ವೈವಾಹಿಕ ಜೀವನವೆಂದರೆ ಧರ್ಮಮಂತ್ರದಿಂದ ಪಾವನಗೊಳಿಸಿದ ವ್ಯಭಿಚಾರ. ವಿವಾಹದ ಅರ್ಥ ಇಷ್ಟು ಸಂಕುಚಿತವಾದದ್ದಾದರೆ ಹೆಂಡತಿಯ ಬೇಡಿಯನ್ನು ಕಾಲೊಳಗೆ ಹಾಕಿಕೊಳ್ಳದೇ ಇರುವ ಸಾವಿರಾರು ಮಂದಿಯನ್ನು ಕಾಣಬಹುದಾಗಿತ್ತು. ಆದರೆ ಈ ಜಗತ್ತಿನಲ್ಲಿ ಹಾಗಾಗುವದಿಲ್ಲ. ಮದುವೆಯಲ್ಲಿ ಶರೀರಕ್ಕಿಂತ ಮನಸ್ಸಿನ ಸಂಬಂಧವೇ ಅಧಿಕವಾಗಿರುತ್ತದೆ. ಆದ್ದರಿಂದಲೇ ಕಟು ಅನುಭವ ಬರುತ್ತಿದ್ದರೂ ಜಗತ್ತು ಮದುವೆಯನ್ನು ಅಪ್ಪಿಕೊಳ್ಳುತ್ತಾ ಇರುತ್ತದೆ.

ಮನಸ್ಸಿನ ಸಂಬಂಧವೆಂದರಾದರೂ ಏನು? ಗಂಡಹೆಂಡಂದಿರು ಒಂದು ಜೀವವಾಗಬೇಕೆಂದು ನಾವು ಯಾವಾಗಲೂ ಓದುತ್ತೇವೆ. ಆದರೆ ಅವರ 'ಒಂದು ಜೀವ'ವಾಗುವ ರೀತಿ ಮಾತ್ರ ವಿಚಿತ್ರವಾಗಿರುತ್ತದೆ. ಒಬ್ಬರು ಇನ್ನೊಬ್ಬರಿಗೆ ಜೀವ ಹೋಗುವ ತನಕ ಕಷ್ಟಕೊಡುವುದಕ್ಕೆ ಪ್ರಾರಂಭಿಸುವುದು ಮೊದಲನೆಯ ರೀತಿ. ಇಬ್ಬರೂ ಒಬ್ಬರಿಗೊಬ್ಬರು ಅರ್ಧಜೀವ ಮಾಡಿಬಿಡುವದು, ಆ 'ಒಂದು ಜೀವ'ವಾಗುವ ಇನ್ನೊಂದು ರೀತಿ. ಹೆಂಡತಿಗೆ ಜೀವವಿಲ್ಲೆಂದು ನಡೆಯುವ ಪಂಥವೊಂದು ಇದ್ದೇ ಇದೆ. ಆದರೆ ಇವೆಲ್ಲಕ್ಕಿಂತ ಒಬ್ಬರಿಗೊಬ್ಬರು ಪೂರಕವಾಗಿ ನಡೆದರೆ ಸಾಕಲ್ಲವೇ? ಮನುಷ್ಯನು ವಿದ್ಯಾವಂತನಿರಲಿ, ದೇಶಭಕ್ತನಿರಲಿ, ಕೀರ್ತಿಶಾಲಿಯಾಗಿರಲಿ, ಅಥವಾ ಲಕ್ಷ್ಮಿಯೇ ಕಾಲನ್ನು ಒತ್ತುತ್ತಿರಲಿ—ಆದರೆ ಅವನ ಹೃದಯ ಮಾತ್ರ ಅತೃಪ್ತವಾಗಿಯೇ ಇರುತ್ತದೆ. ಅಹಂಕಾರದ ಸಮಾಧಾನವಾಗಿ ಉಪಭೋಗಬುದ್ಧಿಯು ಸಂತೋಷ ಪಟ್ಟರೂ ಮನುಷ್ಯನಿಗೆ ಏನೋ ಕಡಿಮೆಯಿದ್ದಂತೆ ಅನಿಸುತ್ತದೆ. ಪ್ರೀತಿಯ ಕೊಡಕೊಳ್ಳುವ ವ್ಯವಹಾರ ನಡೆದ ಹೊರತು ಹೃದಯ ನೆಮ್ಮದಿಗೊಳ್ಳುವದಿಲ್ಲ. ನಾ

ವು ತಾಯಿತಂದೆಗಳನ್ನು ಪ್ರೀತಿಸಿದಾಗಲೇ ಅವರ ಋಣ ತೀರಿಸುತ್ತೇವೆ ಆದರೆ ಗಂಡ ಹೆಂಡರು ಪ್ರೀತಿಸಿದರೆ ಒಬ್ಬರೊಬ್ಬರ ಸಾಲ ತೀರಿಸಿದಂತಾಗುವದಿಲ್ಲ. ಕೇವಲ ಪ್ರೇಮಕ್ಕಾಗಿಯೇ ಪರಸ್ಪರರು ಪ್ರೀತಿಸುತ್ತಾರೆ. ಇತರ ಆಪ್ತೇಷ್ಟರ ಪ್ರೇಮವು ರಕ್ತವನ್ನೂ, ಗೆಳೆಯರ ಪ್ರೇಮವು ಋಣಾನುಬಂಧವನ್ನೂ ಅವಲಂಬಿಸಿರುತ್ತದೆ. ಆದರೆ ಪತಿಪತ್ನಿಯರ ಪ್ರೇಮವು ರಕ್ತಕ್ಕಿಂತ ಗಟ್ಟಿಯೂ, ಋಣಾನುಬಂಧಕ್ಕಿಂತ ದೃಢವೂ ಇರುತ್ತದೆ. ನಾವು ಭಕ್ತಿಪೂರ್ವಕವಾಗಿ ದೇಶ ಮತ್ತು ಸಮಾಜದ ಸೇವೆಯನ್ನು ಮಾಡಬಹುದು, ಆದರೆ ಅದು ತನ್ನ ಹೃದಯದ ಸುಖ ದುಃಖಗಳಲ್ಲಿ ಭಾಗಿಯಾಗುವುದು ಶಕ್ಯವಿಲ್ಲ. ಮನುಷ್ಯನಿಗೆ ತನ್ನ ಹೃದಯವನ್ನು ಇಬ್ಬರ ಎದುರಿನಲ್ಲಿ ಮಾತ್ರ ಬಿಚ್ಚುವ ಧೈರ್ಯವಾಗುತ್ತದೆ. ಒಬ್ಬ ದೇವನು. ಇನ್ನೊಬ್ಬ ಜೀವನದ ಜೊತೆಗಾರ. ಈ ದೃಷ್ಟಿಯಿಂದ ನೋಡಿದರೆ ಪತಿಯು ಪತ್ನಿಯ ದೈವ, ಪತ್ನಿಯು ಪತಿಯ ದೇವತೆಯಾಗುತ್ತಾಳೆ ಆದರೆ ದೇವಾಲಯದಲ್ಲಿಯ ದೇವರಂತೆ ಸಂಸಾರ ಮಂದಿರದಲ್ಲಿಯ ದೇವರೂ ಕಲ್ಲಾಗಿ ಬಿಟ್ಟಿದ್ದಾರೆ. ಇದು ನಮ್ಮ ಅಜ್ಞಾನದ ದೋಷವಿರುತ್ತದೆ. ಯಾವನಾದರೊಬ್ಬ ರಸಿಕ ಕೊಳಲನ್ನು ನೀರು ಕಾಯಿಸುವದಕ್ಕೆ ಉಪಯೋಗಿಸಿದರೆ ಆ ತಪ್ಪಾರದು?"

ಸಾಯಂಕಾಲ ಗೋಪಾಳರಾಯರು ತಮ್ಮ ವರಶೋಧದ ಬನ್ನ ಬವಣೆಗಳನ್ನೆಲ್ಲ ತೋಡಿಕೊಂಡರು. ಅವರ ತಂಗಿಯ ವಯಸ್ಸು ಹದಿನೆಂಟಾಗಿತ್ತು. ಇಂತಹ ಕನ್ಯಾನಿಶ್ಚಯ ನಾಟಕದಲ್ಲಿ ಪಾತ್ರವಹಿಸಿ ಆಕೆಗೂ ಸಾಕಾಗಿತ್ತು. ತನ್ನಿಂದ ಏನಾದರೂ ಅಚಾತುರ್ಯ ಘಟಿಸಿದಲ್ಲಿ ಕೈಗೆ ಬಂದ ತುತ್ತು ಬಾಯಿಗೆ ಬೀಳಲಿಕ್ಕಿಲ್ಲವೆಂದು ಸಾಶಂಕಳಾಗಿರುತ್ತಿದ್ದಳು. ಅವಳ ದೈನ್ಯಸ್ಥಿತಿಯನ್ನು ಕಂಡು ಆತನಿಗೆ ಮರುಕವೆನಿಸಿತು

-ಬಂದ ಅತಿಥಿಗಳಿಗೆ ಚಹಾಕೊಟ್ಟು, ತಾಯಿಯನ್ನು ಕೇಳಿ ಯಾವುದನ್ನೂ ನಿಶ್ಚಯಿಸುತ್ತೇನೆಂದು ಹೇಳಿ ಗೋಪಾಳರಾಯರನ್ನು ಕಳುಹಿಸಿಕೊಟ್ಟನು.

"ಹೂಂ, ಹೇಗಿದ್ದಾಳೆ ಹುಡುಗಿ?"

"ಗೋಪಾಳರಾಯರ ತಂಗಿಯಂತೆಯೇ ಇದ್ದಾಳೆ."

"ಹೀಗೆ ಏನಾದರೊಂದು ಮಾತನಾಡಿದರೆ ಸಾಕು." ತಾಯಿ ಹುಸಿ ಮುನಿಸಿನಿಂದ ನುಡಿದಳು.

"ನಿನಗೇನು ಹೇಳಲಮ್ಮಾ? ಚಳಿ ಬಂದವರಂತೆ ಗಡಗಡನೆ ನಡು ಗುತ್ತಿದ್ದಳು ಅವಳನ್ನು ನನಗೆ ತೋರಿಸುವುದರ ಬದಲು ಡಾಕ್ಟರರಿಗೆ ತೋರಿಸಿದರೆ ಒಳಿತಿತ್ತು."

"ಚೇಷ್ಟೆ ಮಾಡುತ್ತಾನೆ, ಚೇಷ್ಟೆ! ನಾಳೆ ಸ್ವತಃ ಮಗಳ ಮದುವೆ ಮಾಡುವಾಗ ಗೊತ್ತಾದೀತು."

"ನನ್ನ ಮಗಳು ತನ್ನ ಮದುವೆಯನ್ನು ತಾನೇ ಮಾಡಿಕೊಂಡಾಳು. ಮದುವೆಗಾಗಿ ತಂದೆ ತಾಯಿಂದಿರಿಗೆ ತೊಂದರೆ ಕೊಡುವಷ್ಟು ಮೂರ್ಖ ಳಾಗಲಿಕ್ಕಿಲ್ಲ."

"ಆ ನಿನ್ನ ಸುಧಾರಣೆಯೆಲ್ಲ ಇರಲಿ. ಈಗ ಆ ಗೋಪಾಳರಾಯರಿಗೆ ಏನೆಂದು ಉತ್ತರ ಕೊಡುವ?"

"ನೀನು ನಿಶ್ಚಯಿಸಿದ್ದನ್ನೇ ಹೇಳುವೆ. ಪೋಲಿಸರು ಕೊಲೆಯನ್ನು ಶೋಧಿಸಬೇಕು. ಅತ್ತೆ ಸೊಸೆಯನ್ನು ಶೋಧಿಸಬೇಕು."

"ಒಳ್ಳೇ ತುಂಟನಾಗಿಬಿಟ್ಟಿದ್ದಿಯಲ್ಲ! ಹುಡುಗಿಯೇನೋ ಚನ್ನಾಗಿ ಇದ್ದಾಳೆ. ಆದರೆ ಆಭರಣದ ಆಸೆ ಬಹಳ. ಹೀಗೆ ಸಹಜವಾಗಿ ನಮ್ಮಲ್ಲಿದ್ದ ಆಭರಣಗಳನ್ನೆಲ್ಲ ತೋರಿಸಿದೆ. ಆಗ ಅವಳು "ಇಷ್ಟೇ ಏನು?" ಎಂದಳು.

"ನಾನು ಮಾಸ್ತರನಿದ್ದದ್ದು ಅವಳಿಗೆ ಗೊತ್ತಿರಲಿಕ್ಕಿಲ್ಲ. ನಮ್ಮ ಸರಾಫಿ ಅಂಗಡಿಯಿಲ್ಲವೆಂದು ನಾಳೆ ಗೋಪಾಳರಾಯರಿಗೆ ತಿಳಿಸುತ್ತೇನೆ."

"ಇಲ್ಲದ ಉಸಾಬರಿ ಯಾಕಪ್ಪಾ! ನಮಗೆ ಸದ್ಯ ಆಲೋಚನೆ ಇಲ್ಲ ವೆಂದು ಹೇಳಿದರಾಯಿತು."

ಸುಧಾಕರನು ನೋಡುತ್ತಿದನು. ದಾದಾಸಾಹೇಬರು ಸಂದರ್ಭ ಸಿಕ್ಕಾಗಲೆಲ್ಲ ತನ್ನ ಸ್ವಾರ್ಥತ್ಯಾಗದಿಂದ ಶಾಲೆ ಸ್ಥಾಪಿತವಾಗಿದೆಯೆಂಬ ಸಂಗತಿಯನ್ನು ಹೇಳಿಕೊಳ್ಳಲು ಮರೆಯುತ್ತಿರಲಿಲ್ಲ. ಆದರೆ ಒಂದೆರಡು ಸಾವಿರ ರೂಪಾಯಿ ಉತ್ಪನ್ನವುಳ್ಳ ಮನೆಯ ವ್ಯವಹಾರ ನೋಡಿಕೊಳ್ಳುವುದಕ್ಕಾಗಿಯೇ ಅವರು ಇಲ್ಲಿದ್ದರೆಂಬುದು ಸುಧಾಕರನ ತೀಕ್ಷ್ಣಬುದ್ಧಿಗೆ ಹೊಳೆಯದೆ ಹೋಗಲಿಲ್ಲ. ಮಧುಕರ ಹಾಗೂ ಉಳಿದ ಶಿಕ್ಷಕರು ಮನೆಯಲ್ಲಿ ನೊಣ ಹೊಡೆಯುವುದಕ್ಕಿಂತ ಶಾಲೆಯಲ್ಲಿ ಹುಡುಗರನ್ನು ಹೊಡೆಯುತ್ತ ಕೂಡ್ರುವುದು ಒಳಿತೆಂದು ಭಾವಿಸಿದಂತಿತ್ತು. ಒಬ್ಬ ತನ್ನ ಕವಿತೆಯಲ್ಲಿ ಗುಂಗಾದವ; ಇನ್ನೊಬ್ಬ ಕೋರ್ಟಿನ ಕೆಲಸದಲ್ಲಿ ಮಗ್ನ; ಮತ್ತೊಬ್ಬ ಊರಲ್ಲಿಯ ಯಾವುದಾದರೊಂದು ಜವಳಿ ಅಂಗಡಿಯಲ್ಲಿ ಕೂತು ಮೂಗಿನಿಂದ ಹೊಗೆ, ಮುಖದಿಂದ ಹಾಳುಹರಟೆಯನ್ನು ಹರಡಿಸುತ್ತ ಜಳಗಿನ ವೇಳೆ ಕಳೆಯುವುದರಲ್ಲಿ ಜಾಣ. ಶಾಲೆಯಲ್ಲಿ ಹೋಗಿ ಕಲಿಸುವದೆಂದರೆ ಬಿಟ್ಟಿ ಕೆಲಸ. ವೃತ್ತಪತ್ರಿಕೆಯಲ್ಲಿಯ ಸುದ್ದಿಯ ಹೊರತು ವಾಚನವಿಲ್ಲ, ಊರೊಳಗಿನ ಹಾಳುಹರಟೆಯ ಹೊರತು ಚರ್ಚೆಗೆ ಬೇರೆ ವಿಷಯವೇ ಇಲ್ಲ: 'ಹುಡುಗರಿಗೆ ಅಭ್ಯಾಸ ಮಾಡುವುದೇ ಬೇಡವಾಗಿದೆ.' ಎಂಬ ನಿತ್ಯ ಶರಾದ ಹೊರತು ವಿದ್ಯಾರ್ಥಿಗಳ ಬಗ್ಗೆ ವಿಶೇಷ ವಿಚಾರವಿಲ್ಲ. ತಿಂಗಳಿಗೇ ತಿಂಗಳಿಗೇ ವಸೂಲಾಗಿ, ಇನಸ್ಪೆಕ್ಟರರ ಮರ್ಜಿ ಕಾದು ವಾರ್ಷಿಕ ಗ್ರ್ಯಾಂಟು ಪಡೆದರೆ ಅವರ ದಿಗ್ವಿಜಯವಾದಂತೆ. ತಮ್ಮ ವಿದ್ಯಾರ್ಥಿಗಳಲ್ಲಿ ಭಾವೀ ನಾಡನಿರ್ಮಾಪಕರು ಇರಬಹುದೆಂಬ ಕಲ್ಪನೆಯೇ ಅವರಿಗೆ ಬರುವಂತಿಲ್ಲ. ನಿಜವಾದ ಶಿಕ್ಷಕನೆಂದರೆ ಉತ್ಕೃಷ್ಟ ಮೂರ್ತಿಕಾರ. ಕಲ್ಲಿನಿಂದ ದೇವರನ್ನು ನಿರ್ಮಿಸುವುದರಲ್ಲಿಯೇ ಆತ ತನ್ಮಯನಾಗಬೇಕು. ಆದರೆ ಮಧುಕರ ಮೊದಲಾದ ಶಿಕ್ಷಕರು ಉಪ್ಪಾರರಂತೆ ಕಲ್ಲಿನ ಮೇಲೆ ಕಲ್ಲಿಟ್ಟು ಸಿಕ್ಕಸಿಕ್ಕಂತೆ ಕೆಲಸಮಾಡಿ ಮೂರ್ತಿಕಾರನ ಶ್ರೇಯಸ್ಸು ಮಾತ್ರ ಸಿಗಬೇಕೆಂದು ಹವಣಿಸುತ್ತಾರೆ.

ಇನ್ನೊಂದು ಪಂಗಡವೆಂದರೆ ಉತ್ಕೃಷ್ಟ ಶಿಕ್ಷಣಕೊಡಬೇಕೆಂಬ ಕಳಕಳಿಯುಳ್ಳ ಶಿಕ್ಷಕರದು. ಆದರೆ ಜೀವಿತಸರ್ವಸ್ವದ ಎರಡು ಸಮೀ

ಪದ ಶಿಖರಗಳ ಮೇಲೆ ಇಚ್ಛೆ ಮತ್ತು ಸಿದ್ಧಿ ಇವು ಒಂದಕ್ಕೊಂದು ತುಂಬಾ ಉತ್ಕಂಠೆಯಿಂದ ನೋಡುತ್ತಿದ್ದರೂ, ನಡುವೆ ಪರಿಸ್ಥಿತಿಯ ಭಯಂಕರ ಕಂದರವಿದ್ದ ಮೇಲೆ ಅವುಗಳ ಮಿಲನವಾಗುವ ಬಗೆ ಹೇಗೆ? ಬಡತನದ ಮೂಲಕ ಒಂದೆರಡು ಖಾಸಗಿ ಶಿಕ್ಷಣಕ್ಕಾಗಿ ಒಬ್ಬ ಅಲೆದಾಡಿದರೆ, ಇನ್ನೊಬ್ಬ ಪ್ರತಿಕೂಲ ವಾತಾವರಣದ ಮೂಲಕ ಕೈ ಕಟ್ಟಿಕೊಂಡು ಸುಮ್ಮನೆ ಕುಳಿತುಬಿಡುತ್ತಾನೆ. ದೇಶದ ಭವಿತವ್ಯಕ್ಕೆ ಆಸ್ತಿವಾರವಾಗಿದ್ದ ಶಿಕ್ಷಣದ ಈ ದುರ್ದೆಶೆಯನ್ನು ಕಂಡು ಸುಧಾಕರನ ಮನಸ್ಸು ಕ್ಷುಬ್ಧವಾಗಿ ಅಂತಃಕರಣವು ಉದ್ವೇಗಗೊಂಡಿತು. ಅನೇಕರು ನಿರುಪಾಯರಾಗಿ ಈ ಉದ್ಯೋಗಕ್ಕೆ ಜೋತುಬೀಳುತ್ತಾರೆ ಒಬ್ಬರಿಗೆ ಮನೆಯ ಊಟ ಉಂಡು ಕಲಿಸಲು ಬರುವಂತಿದ್ದರೆ–ಇನ್ನೊಬ್ಬರಿಗೆ ತಮ್ಮ ಜಹಾಗೀರಿನ ವ್ಯವಸ್ಥೆ ನೋಡಿಕೊಂಡು ಸಾಲೆಯ ಸಂಬಳ ಕಿಸೆಯಲ್ಲಿ ತುರುಕಿಕೊಳ್ಳಲು ಬರುವಂತಿದ್ದರೆ–ಮಗದೊಬ್ಬರಿಗೆ ಬೇರೆ ಉದ್ಯೋಗ ದೊರೆಯದಿದ್ದರೆ- ಖಾಸಗಿ ಸಾಲೆನಡೆಯುತ್ತಿದೆ. ಆದರೆ ಅಜ್ಞಾನ, ದಾರಿದ್ರ್ಯಗಳಂತಹ ಭಯಂಕರ ಪರ್ವತವನ್ನು ಉಲ್ಲಂಘಿಸ ಬೇಕಾದಾಗ ಇಂತಹ ಇರುವೆಯ ವೇಗದಿಂದೇನು ಪ್ರಯೋಜನ? ಸಾಲೆಯ ಶಿಕ್ಷಣವೆಂದರೆ ವಾಙ್ಮಯ ಸಾಗರಕ್ಕೆ ಮುಟ್ಟಿಸುವ ನದಿಯು ಇದ್ದಹಾಗೆ. ಈ ನದಿಯಲ್ಲಿ ಮೊಣಕಾಲ ಮಟವೂ ನೀರಿಲ್ಲದಿದ್ದರೆ ವಿದ್ಯಾರ್ಥಿಗಳ ಮನೋನೌಕೆಯು ಅದರಲ್ಲಿ ಸಾಗಿ ಅವರಿಗೆ ಆ ಭವ್ಯ, ರಮ್ಯ ಸಾಗರದ ದರ್ಶನವೆಂತಾದೀತು? ಯಾವ ಇತಿಹಾಸದಿಂದ ಪೂರ್ವವೈಭವದ ಸ್ಮರಣೆಯಾಗಿ ವಿದ್ಯಾರ್ಥಿಗಳ ಭುಜಗಳು ಆ ಗತವೈಭವವನ್ನು ತಿರುಗಿ ಸಂಪಾದಿಸಲು ಸ್ಫೂರ್ತಿಗೊಳ್ಳುವದಿಲ್ಲವೋ ಯಾವ ಭೂಗೋಲದಿಂದ ಮಾತೃಭೂಮಿಯ ಸ್ವಾಭಾವಿಕ ಅಭಿಮಾನವು ಸೂರ್ಮುಡಿ ಬೆಳೆದು ಅವಳ ಅನಂತ ದೇಣಿಗೆಗಳ ಉಪಯೋಗಮಾಡಿಕೊಳ್ಳುವ ಬುದ್ಧಿ ಸೂಚಿಸುವದಿಲ್ಲವೋ, ಯಾವ ಶಾಸ್ತ್ರೀಯ ವಿಷಯದಿಂದ ವಿದ್ಯಾರ್ಥಿಗಳ ಮನಸ್ಸಿನಲ್ಲಿ ಹೊಸಹೊಸ ಶೋಧಹಚ್ಚುವ ಮಹತ್ವಾಕಾಂಕ್ಷೆಯ ಬೀಜ ಬಿತ್ತಲ್ಪಡುವದಿಲ್ಲವೋ, ಯಾವ ಕಾವ್ಯದಿಂದ ಅಂತಃಕರಣವು ಉದಾರ ಮತ್ತು ಕೋಮಲವಾಗಿ ಪರಿವರ್ತಿಸುವದಿಲ್ಲವೋ, ಯಾವ ಸಂಸ್ಕೃತ ಜ್ಞಾನದಿಂದ ಅವರಿಗೆ ತಮ್ಮ ನಿಜವಾದ

ಧರ್ಮದ ಕಲ್ಪನೆ ಬರುವದಿಲ್ಲವೋ ಅಂತಹ ಶಿಕ್ಷಣವು ಗಿಳಿವಾರಕ್ಕಿಂತ ಹೇಗೆ ಹೆಚ್ಚಿನದಾದೀತು? ಶಿಕ್ಷಣದಿಂದ ವಿದ್ಯಾರ್ಥಿಗಳ ಮನಸ್ಸಿನಲ್ಲಿ ವಿಚಾರ, ಹೃದಯದಲ್ಲಿ ಸಹಾನುಭೂತಿ, ಬಾಹುಗಳಲ್ಲಿ ಸಾತ್ವಿಕಶಕ್ತಿ ಮಿಂಚಬೇಕು. ಅದರೆ ಟಂಕಸಾಲೆಯಿಂದ ಹೊರಬಿದ್ದ ರೂಪಾಯಿಗಳಂತೆ ಒಂದೇ ಪಡಿಯಚ್ಚಿನ ನಿರ್ಜೀವ ವಿದ್ಯಾರ್ಥಿಗಳ ಉಪಯೋಗವೇನು?

ಹೀಗೆ ಈ ವಿಚಾರ ತರ್ಕದಲ್ಲಿ ಸಿಲುಕಿದ್ದುದರಿಂದ ಮೊದಲಿನ ಉತ್ಸಾಹ ಮಾಯವಾಗಿತ್ತು ನಿರಾಶೆ ಹೆಚ್ಚುತ್ತಿತ್ತು. ಆದರೂ ತಾಯ ವಾತ್ಸಲ್ಯ, ಸುಧೆಯ ಕಣ್ಣು ಇವೆರಡರ ಸಹಾಯದಿಂದ ಹೇಳುವಷ್ಟು ಅನಿಷ್ಟ ಪರಿಣಾಮವಾಗಲಿಲ್ಲ. ವಾತದಿಂದ ತಾಯಿಯ ಕಾಲು ಹಿಡಿದದ್ದರಿಂದ ಒಲೆಯ ಮುಂದೆ ಕುಳಿತು ಹೇಗಾದರೂ ಮಾಡಿ ಅಡಿಗೆಯನ್ನಷ್ಟು ಮಾಡುತ್ತಿದ್ದರು. ಉಳಿದ ಮನೆಗೆಲಸ ಅವರಿಂದಾಗುವುದು ಶಕ್ಯವಿಲ್ಲವಿದ್ದರೂ ಮನೆಗೆಲಸವೆಲ್ಲ ವ್ಯವಸ್ಥಿತವಾಗಿ ಕೊನೆಗೊಳ್ಳುತ್ತಿತ್ತು. ಇದರ ಬಗ್ಗೆ ತಾಯಿ ಮಗ ಅನೇಕಸಲ ಮಾತನಾಡಿಕೊಳ್ಳುತ್ತಿದ್ದರು. ಸುಧೆಯು ಅವರ ಮನೆಯಲ್ಲಿ ಮಜ್ಜಿಗೆ ಕಡೆಯುತ್ತಿರುವಾಗ ಸುಧಾಕರ “ಅಮ್ಮಾ, ನಾವೀಗ ದೊಡ್ಡ ಸಾಧು ಆಗಿದ್ದೇವೆ. ಅಲ್ಲವೇ?’ ಎಂದ. ತಾಯಿಗೆ ಆಶ್ಚರ್ಯವಾಯಿತು.

“ಏಕಮ್ಮಾ, ಆಶ್ಚರ್ಯಪಡುವಿ? ಏಕನಾಥನಿಗೆ ಕಷ್ಟವಾಗಬಾರದೆಂದು ದೇವರೇ ಅವರ ಮನೆಯಲ್ಲಿ ನೀರುತಂದು ಹಾಕುತ್ತಿದ್ದನಂತೆ. ನಮ್ಮ ಮನೆಯಲ್ಲಿ ನಾನಾಗಲೀ, ನೀನಾಗಲೀ ನೀರು ತರದಿದ್ದರೂ ಹಂಡೆ ತುಂಬಿದ್ದೇ ಇರುತ್ತದೆ. ಕೂಲಿಯವರ್‍ಯಾರಾದರೂ ಮಾಡುತ್ತಾರೆನ್ನಬಹುದಿತ್ತು; ಆದರೆ ನಾವಾರಿಗೂ ಹಣಕೊಡಬೇಕಾಗುವದಿಲ್ಲ”

ಈ ಮಾತಿನಿಂದ ತಾಯಿ ನಕ್ಕಳು. ಸುಧೆಯು ಮಾತ್ರ ಕೆಳಗೆ ಮಾಡಿದ ತಲೆ ಮೇಲಕ್ಕೆತ್ತಲಿಲ್ಲ. ಅವಳ ಕೈ ಮಜ್ಜಿಗೆ ಕಡೆಯುತ್ತಿದ್ದರೂ, ಅವಳ ಹೃದಯವನ್ನು ಇನ್ನಾರೋ ಮಥಿಸುತ್ತಿದ್ದರು

ಇನ್ನೊಂದು ಸಲ ಜಾನಕಿಯಮ್ಮ ಸುಧೆಗೆ “ಮಗೂ, ನನ್ನ ಕಾಲು ಹೋಗಿಬಿಟ್ಟರೂ ನಿನ್ನ ಎರಡು ಕೈ ಬಂದದ್ದರಿಂದ ಈಗ ಯಾವ ತೊಂದರೆಯೂ ಇಲ್ಲ.” ಎಂದಳು.

"ಎರವಲು ಕೈ ಎಷ್ಟೆಂದರೂ ನಮ್ಮದಾಗಲಾರದು. ನನ್ನ ಈ ಕೈಗಳು ಅತ್ತಿಗೆಯು ಬಾಣಂತಿತನ ಮುಗಿದೊಡನೆ ಸಾವಂತವಾಡಿಗೆ ಹೋಗುವವು."

ಈ ಸಂಭಾಷಣೆಯಿಂದ ಜಾನಕಿಯಮ್ಮನ ಮನಸ್ಸಿನಲ್ಲಿ ಕೋಲಾಹಲವೆದ್ದಿತು. ಸುಧೆಯು ಕನ್ಯೆಯಾಗಿಯೇ ಇದ್ದರೆ ಅವಳನ್ನು ತನ್ನ ಸೊಸೆಯನ್ನಾಗಿ ಮಾಡಿಕೊಳ್ಳಲು ದೇವರಿಗೆ ಹರಕೆ ಹೊರುತ್ತಿದ್ದಳು. ಇದೀಗ ಪುಣೆ ಮುಂಬೈ ಕಡೆಯಲ್ಲಿ ಪುನರ್ವಿವಾಹವಾಗುತ್ತದೆಂದು ಗೊತ್ತಿತ್ತು. ಸಕಾರಣವಾಗಿ ಸಿದ್ಧ ಮಾಡಲು ಬರುತ್ತಿದ್ದಿಲ್ಲವಾದರೂ ಅವರ ಮನಸ್ಸಿಗೆ ಪುನರ್ವಿವಾಹ ಒಗ್ಗುತ್ತಿರಲಿಲ್ಲ. ಮನದಲ್ಲಿ ಮನೆಮಾಡಿದ ಪರಂಪರಾಗತ ರೂಢಿಯ ಪರದೆಯನ್ನು ದೂರಮಾಡುವ ಧೈರ್ಯ ಅವಳ ಮೈಯ್ಯಲ್ಲಿರಲಿಲ್ಲ. ಆದರೆ ಅವರ ಧೈರ್ಯದಲ್ಲಿದ್ದ ನ್ಯೂನತೆಯನ್ನು ಪ್ರೇಮವು ತುಂಬಿ ತಂದಿತ್ತು. ಸುಧಾಕರನ ಎಷ್ಟೋ ಹೊಸ ವಿಚಾರಗಳು ಆಕೆಗೆ ಒಗ್ಗುತ್ತಿರಲಿಲ್ಲವಾದರೂ ಮಗನ ಮೇಲಿನ ಮಮತೆಯ ಸೆಳವಿನಲ್ಲಿ ಈ ಸೇರದಿರುವಿಕೆಯು ಮಾಯವಾಗಿಬಿಡುತ್ತಿತ್ತು. ಇತ್ತಿತ್ತಲಾಗಿ ಸುಧಾಕರನು ಪುನರ್ವಿವಾಹದ ಪ್ರಶ್ನೆಯೆತ್ತಬಹುದೆಂಬ ಚಿಂತೆಯುಂಟಾಗಿತ್ತು. ಸುಧೆಯನ್ನು ಮನೆಗೆ ಬರಗೊಡದಿರುವುದೇ ಇದಕ್ಕೆ ಉತ್ತಮ ಉಪಾಯವೆಂದು ತಿಳಿದಿದ್ದರೂ, ಪ್ರಕೃತಿಯ ಅಸ್ವಾಸ್ಥ್ಯದಿಂದ ಜನಬಲ ಆಕಗೆ ಬೇಕೇ ಆಗಿತ್ತು. ಅಲ್ಲದೆ ಸುಧೆಯ ಪ್ರೇಮಳ ಸ್ವಭಾವದ ಮುಂದೆ ಜಾನಕಿಯಮ್ಮನ ರೂಢಿ ಸೋಲನ್ನು ಒಪ್ಪಲೇಬೇಕಾಗಿತ್ತು. ತನ್ನ ಮಗನು ಸುಧೆಗೆ ಕಲಿಸುತ್ತಿರುವಾಗ ಜಾನಕಿಯಮ್ಮ ವಾತ್ಸಲ್ಯದಿಂದ ಅವರೆಡೆಗೆ ನೋಡುತ್ತಿದ್ದಳು. ಪುರಾಣದಲ್ಲಿ ಯಾವ ದೇವರಾದರೂ ಪುನರ್ವಿವಾಹ ಮಾಡಿಕೊಂಡ ಉಲ್ಲೇಖದೊರೆತಿದ್ದರೆ ಆಕೆಯ ಸಂದೇಹ ನಿವೃತ್ತಿಯಾಗಿ 'ಈ ಜೋಡಿಯು ಲಕ್ಷ್ಮೀನಾರಾಯಣರಂತೆ ಶೋಭಿಸಬಹುದು.' ಎನ್ನುತ್ತಿದ್ದಳು. ಪುನರ್ವಿವಾಹದ ವಿಚಾರ ಬಂದಾಗಲೆಲ್ಲ ಪಾಪ, ನರಕಗಳ ಕಲ್ಪನ ಬಂದುಬಿಡುತ್ತಿದ್ದವು.

ಸುಧೆಯ ಹೃದಯದ ಪರಿಚಯವಾಗುತ್ತ ಹೋದಂತೆಲ್ಲ ಸುಧಾಕರನ ಮನಸ್ಸು ಅವಳೆಡೆಗೆ ಒಲಿಯಹತ್ತಿತ್ತು. ದಾದಾಸಾಹೇಬರ ಮನೆಗೆ

ಲಸವನ್ನೆಲ್ಲ ತೀರಿಸಿ ತನ್ನ ತಾಯಿಗೆ ಹೇಗೆ ನೆರವಾಗುತ್ತಾಳೆಂಬುದೇ ಆತನಿಗೆ ಬಗೆಹರಿಯದಾಗಿತ್ತು. ಆಕೆ ಯಾವಾಗಲೂ ಹಸನ್ಮುಖಿಯಾಗಿಯೇ ಇರುತ್ತಿದ್ದಳು. ಸುಧಾಕರನ ಕೋಣೆಯು ಒಬ್ಬ ಚತುರ ತೋಟಗನ ನೇತೃತ್ವದಲ್ಲಿಯ ಸುಂದರ ಉದ್ಯಾನವಾಗಿ ಬಿಟ್ಟಿತು. ಅವನ ಪುಸ್ತಕಗಳು ಕುಂಡಿಯೊಳಗಿನ ಹೂವಿನಗಿಡಗಳಂತೆ ಮೇಜಿನ ಮೇಲೆ ವ್ಯವಸ್ಥಿತವಾಗಿ ಇರಹತ್ತಿದವು. ಅಂಗಿಯ ಗುಂಡಿಗಳಿಗೆ ಕದ್ದು ಬೀಳುವುದಕ್ಕೆ ಸಂಧಿಯೇ ದೊರೆಯದಾಯಿತು. ಸ್ನಾನದ ಹೊತ್ತಿಗೆ ನಿರಿಗೆ ಹಾಕಿಟ್ಟ ಧೋತರವನ್ನು ಎತ್ತಲು ಅವನಿಗೆ ಅನೇಕ ಪಕಳೆಗಳುಳ್ಳ ಒಂದು ಕಮಲವನ್ನು ಹಿಡಿದಂತೆ ಭಾಸವಾಗುತ್ತಿತ್ತು. ಪ್ರಮಾಣಕ್ಕೆ ಸರಿಯಾಗಿ ಸಕ್ಕರೆಯಿಂದ ಕೂಡಿ ಚಹವು ಹಿತಕರವಾಗಿರುತ್ತಿತ್ತು.”

ಈ ರೀತಿ ಸುಧಾ ಮತ್ತು ಸುಧಾಕರರ ಜೀವನವನ್ನು ಜೋಡಿಸುವ ಸಹಾನುಭೂತಿಯ ದಾರವು ಪ್ರೇಮಪಾಶದಲ್ಲಿ ರೂಪಾಂತರವಾಗಹತ್ತಿತ್ತು. ಆದರೆ ಈ ವಿಷಯದಲ್ಲಿ ಅಮ್ಮನನ್ನು ಕೇಳುವ ಧೈರ್ಯ ಮಾತ್ರ ಸುಧಾಕರನಿಗೆ ಆಗಲೊಲ್ಲದು. ಅಮ್ಮನೊಪ್ಪಿ ಒಲ್ಲೆಂದರೆ ಆತನ ಬಯಕೆ ಪೂರ್ತಿಯಾಗದೆಂದು ಆತನಿಗೆ ಗೊತ್ತಿತ್ತು. ಅಮ್ಮನೊಡನೆ ಸುಧೆಯ ಮಾತು ಎತ್ತುತ್ತಿದ್ದ. ಅವಳ ಸುಸ್ವಭಾವದ ಸ್ತುತಿಮಾಡುತ್ತಿದ್ದ. ಅವಳ ಶಿಕ್ಷಣ ಪೂರ್ಣವಾದರೆ ಅವಳು ಎಷ್ಟು ಕಾರ್ಯ ಮಾಡಬಹುದೆಂಬುದರ ಕಲ್ಪನಾಚಿತ್ರವನ್ನು ಚಿತ್ರಿಸುತ್ತಿದ್ದ. ಆದರೆ ಅವಳ ಪುನರ್ವಿವಾಹದ ಪ್ರಶ್ನೆಯನ್ನು ಮಾತ್ರ ಬಚ್ಚಿಡುತ್ತಿದ್ದ. ತನಗೆ ಯಾವುದೋ ಭಯಂಕರ ರೋಗಹಿಡಿದುಕೊಂಡಿದೆ ಎಂದು ಭಾವಿಸಿಕೊಂಡ. ಮನುಷ್ಯ ತನ್ನ ಪ್ರಕೃತಿಯನ್ನು ತಜ್ಞರಿಗೆ ತೋರಿಸಲು ತಪ್ಪಿಸಿಕೊಳ್ಳುವಂತೆ ಸುಧೆಯ ಮದುವೆಯ ವಿಷಯವನ್ನು ಮಾತ್ರ ಎಷ್ಟು ಮಾಡಿದರೂ ಅವನಿಂದ ಅಮ್ಮನ ಮುಂದೆ ಹೇಳಲು ಸಾಧ್ಯವಾಗುತ್ತಿದ್ದಿಲ್ಲ.

ಜುಲೈ ತಿಂಗಳಲ್ಲಿ ಇನ್ನೊಂದು ಅನಿಷ್ಟ ಘಟನೆ ಸಂಭವಿಸಿತು. ವಾರುಣಿಯ ಮನೆಯ ವಿಳಾಸಕ್ಕೆ ಒಂದು ಅಶ್ಲೀಲಪತ್ರ ಬಂದಿತ್ತು. ಅದು ರಾವಸಾಹೇಬರ ಕೈಗೆ ಸಿಕ್ಕು ದಾದಾಸಾಹೇಬರ ಕಡೆಗೆ ಹೋಯಿತು.

ಅಕ್ಷರದ ಮೇಲಿಂದ ಅದು ಜಗನ್ನಾಥನದೆಂದು ಗೊತ್ತಾಯಿತು. ದಾದಾ ಸಾಹೇಬರು ಗದರಿಸಿ ಕೇಳಿದಾಗ ಜಗನ್ನಾಥ ಒಪ್ಪಿಕೊಂಡ. ಸುಧಾಕರ ನಿಗೆ ಜಗನ್ನಾಥನ ಈ ಉಪದ್ವ್ಯಾಪ ಗೊತ್ತಾಗಲು "ನಿನ್ನಂಥವನನ್ನು ನನ್ನ ಸಾಲೆಯಿಂದ ಹೊರಗೆ ಹಾಗಲೇಬೇಕು." ಎಂದು ಬೆದರಿಸಿದನು.

ಆದರೆ ಜಗನ್ನಾಥನಿಗೆ ಯಾವ ಶಿಕ್ಷೆ ವಿಧಿಸಬೇಕೆಂಬ ಬಗ್ಗೆ ಶಿಕ್ಷಕ ರಲ್ಲಿ ಚರ್ಚೆ ನಡೆದಾಗ "ಅವನನ್ನು ಸಾಲೆಯಿಂದ ಹೊರಗೆ ಹಾಕುವುದು ಉಚಿತವಲ್ಲ" ಎಂದು ತನ್ನ ಅಭಿಪ್ರಾಯವನ್ನು ಸೂಚಿಸಿದನು. ಇದನ್ನು ಕೇಳಿ ಮಧುಕರನಿಗೆ ಸಿಟ್ಟು ಬಂದಿತು. "ನಿನಗೆ ಅವನ ಅಕ್ಕನ ಪರಿಚ ಯವಿದೆಯೆಂದಾಗಲೀ, ಇವನ ಭಾವ ಗಂಗಾಧರ ರಾವಸಾಹೇಬರ ಮನೆಯಿಂದ ನನಗೆ ದಿನಾಲು ಟ್ಯೂಷನ್ನು ತಂದುಕೊಡುತ್ತಾನೆಂದಾಗಲೀ, ಇವನನ್ನು ಕ್ಷಮಿಸುವುದು ಮೂರ್ಖತನವಾದೀತು." ಮಧುಕರನ ಭಾಷ ಣ ಮುಗಿದೊಡನೆ ದಾದಾಸಾಹೇಬರು "ರಾವಸಾಹೇಬರ ಅವಕೃಪೆಗೆ ಒಳಗಾಗುವುದು ಸರಿಯಲ್ಲ. ಅವರಿಂದ ಮುಂದೆಯೂ ನೆರವಾದೀತು. ಅಲ್ಲದೆ ಇಂತಹ ಹುಡುಗನನ್ನು ಹೊರಗೆ ಹಾಕಿದರೆ ಇತರ ಹುಡುಗರೂ ಪಾರ ಕಲಿತಾರು." ಎಂದರು. ಜಗನ್ನಾಥನಿಗೆ ಹಾನಿಯಾಗಬಾರದೆಂದು ಸುಧಾಕರನು ಯತ್ನಿಸಿದ. ಆದರೆ ಮಧುಕರನು ಮೇಲಿಂದ ಮೇಲೆ ಯಮುನೆಯ ಸಂಬಂಧ ಉಲ್ಲೇಖಿಸಹತ್ತಿದ್ದರಿಂದ ಸುಧಾಕರನು ಅಲ್ಲಿಂದ ಹೊರಟು ಹೋಗಬೇಕಾಯಿತು.

ದಾದಾಸಾಹೇಬರು ಜಗನ್ನಾಥನು ಸಾಲೆಗೆ ಬಾರದಂತೆ ವ್ಯವಸ್ಥೆ ಮಾಡಿದರು. ಆದರೆ ಜಗನ್ನಾಥನು ಮಾತ್ರ ಸುಧಾಕರನು ಕ್ಲಾಸಿನಲ್ಲಿ ಬಯ್ದುದ್ದನ್ನು ನೆನಸಿ ತನ್ನನ್ನು ಹೊರಗೆ ಹಾಕಲು ಸುಧಾಕರನೇ ಕಾರಣ ನೆಂದು ಗಂಗಾಧರನ ಹತ್ತರ ಹೇಳಿದ. ಸುಧಾಕರನೆಂದರೆ ಗಂಗಾಧರನಿ ಗೆ ಯಾವಾಗಲೂ ಸೇರುತ್ತಿರಲಿಲ್ಲ. ಇದರಿಂದ ಅಪ್ರೀತಿ ಇನ್ನಷ್ಟು ಹೆಚ್ಚಾಯಿತು.

× × × × ×

ಒಮ್ಮೆ ಸುಮಾರು ೫ ಘಂಟೆಗೆ ಎದ್ದು ಸುಧಾಕರನು ಕಾಳಿಗೆ ಪತ್ರ ಬರೆಯುತ್ತಿದ್ದಾಗ ಹೊರಗನಿಂದ ಯಾರೋ "ಮಾಸ್ತರ, ಮಾಸ್ತರ"

ಎಂದು ಕರೆದಂತಾಯಿತು. ಬಾಗಿಲು ತೆರೆದು ನೋಡಲು ಜಗನ್ನಾಥನು ನಿಂತಿದ್ದ.

"ಏನಯ್ಯಾ, ಇಷ್ಟು ನಸುಕಿನಲ್ಲಿ ಬಂದೆ?"

"ಅಕ್ಕ ರಾತ್ರಿ ಹಡೆದಿದ್ದಾಳೆ. ಆಕೆಗೆ ಮೇಲಿಂದ ಮೇಲೆ ಎಚ್ಚರ ತಪ್ಪುತ್ತಿದೆ. ಸ್ಮೃತಿಗೆ ಬಂದಾಗ ನಿಮ್ಮನ್ನು ನೆನಸುತ್ತಾಳೆ. ಅದ್ದರಿಂದ ಅಮ್ಮ ನಿಮ್ಮನ್ನು ಕರೆಯ ಹೇಳಿದ್ದಾಳೆ."

"ಹಾಗಾದರೆ ಬರುವೆ" ಎಂದವನೇ ಒಳಗೆ ಹೋಗಿ ತಾಯಿಗೆ ಎಲ್ಲ ಸಂಗತಿ ತಿಳಿಸಿ ಯಮುನಿನ ಮನೆಗೆ ಬರಲು ಕೇಳಿಕೊಂಡ. ಆದರೆ ತಾಯಿ ಅಶಕ್ತತೆಯ ಮೂಲಕ ಬರಲು ಶಕ್ಯವಿಲ್ಲಾದ್ದರಿಂದ ಭೂಪಾಳಿಯನ್ನು ರಾಗವಾಗಿ ಹಾಡುತ್ತ ಕೆಲಸದಲ್ಲಿ ಮಗ್ನವಾದ ಸುಧೆಗೆ ಕೇಳಿಕೊಂಡ. ತಾನು ಡಾಕ್ಟರರನ್ನು ಕರೆಯ ಹೋದರೆ ಯಾರಾದರೂ ಹೆಂಗುಸರು ಯಮುನಿನ ಬಳಿಯಲ್ಲಿರಲೆಂದು ಆತನ ಉದ್ದೇಶವಾಗಿತ್ತು; ಸುಧೆಯೂ ಬರಲು ಒಪ್ಪಿದಳು. ಅತ್ತಿಗೆಗೆ ಗೊತ್ತಾದರೆ ಬಯ್ಯುವಳೆಂಬ ಕಲ್ಪನೆ ಆಕೆಗೆ ಇದ್ದೇ ಇತ್ತು. ಆದರೆ ಸುಧಾಕರನಿಗೆ ತನ್ನಿಂದ ಸಹಾಯವಾಗಬಹುದೆಂಬ ಕಲ್ಪನೆಯಿಂದಾದ ಆನಂದದ ಪ್ರಭಾವ ಆ ಭಯವನ್ನು ಮೀರಿಸಿತ್ತು. ಸುಧಾಕರ ಮತ್ತು ಸುಧೆಯು ಹೊರಗೆ ಬಂದಾಗ ಜಗನ್ನಾಥನು ಎಲ್ಲಿಯೂ ಕಾಣಿಸಲಿಲ್ಲ. ಗಡಬಿಡಿಯಿಂದ ಮುಂದೆ ಹೋಗಿರಬಹುದೆಂದು ಭಾವಿಸಿ ಕೊಡೆಯನ್ನು ಕಂಕುಳಲ್ಲಿ ತುರುಕಿ, ಲಾಂದ್ರವನ್ನು ಹಿಡಿದುಕೊಂಡು ಸುಧಾಕರನು ಮುಂದಾದ. ಸುಧೆಯು ಮೌನವಾಗಿ ಹಿಂಬಾಲಿಸಹತ್ತಿದಳು.

ತುಸು ಹೊತ್ತಿನ ಮೇಲೆ ತಾನು ಸುಧೆಯನ್ನು ಕರೆದುಕೊಂಡು ಬಂದುದು ಯೋಗ್ಯವಾಗಲಿಲ್ಲವೆಂದು ಸುಧಾಕರನಿಗೆ ಅನಿಸಹತ್ತಿತು. ಯಾಕಂದರೆ ಒಂದಲ್ಲ ಒಂದು ರೀತಿಯಿಂದ ಸುಧೆಯು ತನ್ನ ಜೊತೆಗೆ ಬಂದುದು ಅವಳ ಅತ್ತಿಗೆಯ ಕಿವಿಗೆ ಬಿದ್ದರೆ ಪರಿಣಾಮ ನೆಟ್ಟಗಾಗಲಿಕ್ಕಿಲ್ಲವೆಂದು ಆತ ಅರಿತಿದ್ದ. ಅದರಿಂದ ಸುಧೆಯನ್ನು ಅವಳ ಮನೆಗೆ

ವುಟ್ಟಿಸಿ ತಾನೊಬ್ಬನೇ ಮುಂದೆ ಹೋಗಬೇಕೆಂದು ಯೋಚಿಸಿದ. ಆದರೆ ಸುಧೆಯ ಕಡೆಗೆ ದೃಷ್ಟಿ ಹೊರಳಿದಾಗ ಅವನ ಈ ವಿಚಾರ ಮನಸ್ಸಿನಲ್ಲಿಯೇ ಮಾಯವಾಯಿತು. ತಮ್ಮಿಬ್ಬರಿಗೆ ಮನಬಿಚ್ಚಿ ಮಾತನಾಡುವದಕ್ಕೆ ಒಳ್ಳೆಯ ಸಮಯವೆಂದೆನಿಸಿ ಆತ ಮುಂದುವರಿದ. ಆದರೆ ಹೇಗೆ ಮಾತನ್ನಾರಂಭಿಸಬೇಕೆನ್ನುವಷ್ಟರಲ್ಲಿಯೇ ಮಳೆಯ ಲಕ್ಷಣ ತಲೆದೋರಲಾರಂಭಿಸಿತು.

ಆಕಾಶದೊಳಗೆ ಕಾಳಗದ ಕಹಳೆಯು ಬಾರಿಸಿತು. ಕೂಡಲೇ ಕಪ್ಪು ಚಿಲಕತ್ತು ಧರಿಸಿದ ಮೇಘ ಸೈನಿಕರು ಅತ್ತಿತ್ತ ಸುಳಿದಾಡಹತ್ತಿದರು. ಅವರು ರಣದುಂದುಭಿಯನ್ನು ಬಾರಿಸಿ ನಡುನಡುವೆಯೇ ಮಿಂಚಿನ ಧ್ವಜವನ್ನು ಹಾರಾಡಿಸಹತ್ತಿದರು. ಆ ಮೇಘಗಳಿಗೆ ಹೆದರಿಯೋ ಏನೋ, ಗಾಳಿಯು ಪೃಥ್ವಿಯ ಮೇಲೆ ಓಡುತ್ತಾ ಬಂದಿತು. ಪ್ರೀತಿಯಂತೆ ಭೀತಿಯು ಸಾಂಸರ್ಗಿಕವಿದ್ದ ಮೂಲಕ ಭಯಭೀತವಾಯುವಿನ ಸ್ಪರ್ಶವಾಗಲು ಗಿಡಗಳು ಗಡಗಡನೆ ನಡುಗಹತ್ತಿದವು. ಗಗನದುದ್ಯಾನದಲ್ಲಿ ಅರಳಿದ್ದ ತಾರಕಾಪುಷ್ಪಗಳನ್ನು ಮೇಘಗಳು ಯಾವಾಗಲೋ ನುಚ್ಚುನೂರುಮಾಡಿ ಬಿಟ್ಟಿದ್ದವು. ಸ್ವಲ್ಪ ಹೊತ್ತಿನಲ್ಲಿಯೇ ಅವು ಶರವೃಷ್ಟಿಗೆ ಪ್ರಾರಂಭಿಸಿದವು. ಹಾಗೂ ಒಂದೇ ಸವನೆ ಮಳೆಯ ಧಾರೆಯು ಸುರಿಯಹತ್ತಿತು

ಸುಧಾಕರನು ಕೊಡೆಯನ್ನು ಬಿಚ್ಚಿ ಆಕೆಯ ಮೇಲೆ ಹಿಡಿದ. ತುಫಾನಿನ ಸಾಗರದಲ್ಲಿ ನಾವೆಯು ನಿಲ್ಲದಿರುವಂತೆ, ಆ ಕ್ಷುಬ್ಧವಾಯು ಸಾಗರದಲ್ಲಿ ಕೊಡೆಯು ತಿರುವುಮುರುವಾಗಹತ್ತಿತು. ಗಾಳಿಮಳೆಗಳ ಬೆನ್ನು ಮುಟ್ಟುವ ಆಟ ಆರಂಭವಾದುದರಿಂದ ನಾಲ್ಕೂ ನಿಟ್ಟಿನಿಂದ ಮಳೆಯು ಹೊಡೆಯಹತ್ತಿತು. ಮಳೆ ಕಡಿಮೆಯಾಗುವಲ್ಲಿಯವರೆಗೆ ದಾರಿಯ ಬದಿಯ ಮರದ ಮರೆಗೆ ನಿಲ್ಲಲು ಬಯಸಿ ಒಂದು ಬದಿಗೆ ತಿರುಗಿದನು. ಆಗ ದೀಪದ ಬೆಳಕು ಸುಧೆಯ ಮೋರೆಯ ಮೇಲೆ ಬಿದ್ದದ್ದರಿಂದ ಮಂಜಿನ ಬಿಂದುಗಳಿಂದ ಶೃಂಗರಿಸಲ್ಪಟ್ಟ ವನಶ್ರೀಯಂತೆ ಆಕೆ ಅವನಿಗೆ ಕಂಡಳು. ಆ ಗಿಡದಡಿಯಲ್ಲಿ ನಿಲ್ಲುವಷ್ಟರಲ್ಲಿ ಕಂಬವನ್ನೊಡೆದು ಹೊರಬೀಳುವ ನರಸಿಂಹನಂತೆ ಕಡಕಡಾಟವನ್ನೆಬ್ಬಿಸಿ ಸಿಡಿಲು ಆಕಾಶದಿಂದ ಹೊರಬಿದ್ದಿತು. ಸುಧೆಯು ಒಮ್ಮೆಲೇ ಅಂಜಿ ಸುಧಾಕರನ ಹೆಗಲ ಮೇಲೆ

ಕೈಯಿಟ್ಟಳು. ಕೂಡಲೇ ತನ್ನ ಅರಿವಾಗಿ ಕೈ ಹಿಂತೆಗೆದುಕೊಂಡಳು. ಆ ಸಮಯದಲ್ಲಿ ಗಾಳಿಯು ಮಂಗಳಾಷ್ಟಕ ಹೇಳುತ್ತಿದೆ, ಆಕಾಶವು ತನ್ನ ಮೇಲೆ ಅಕ್ಷತೆಯನ್ನೆಸೆಯುತ್ತಿದೆ, ಮಿಂಚು ಲಾಜಾ ಹೋಮದ ಅಗ್ನಿಯಂತೆ ಹೊಳೆಯುತ್ತಿದೆ ಎಂದು ಅವಳಿಗೆ ಭಾಸವಾಯಿತು. ಆದರೆ ಕ್ಷಣಾರ್ಧದಲ್ಲಿ ತನ್ನ ಕನಸು ನನಸಾಗದೆಂದೆನಿಸಿ ಅವಳ ಕಣ್ಣಿನಲ್ಲಿ ನೀರು ತುಂಬಿ ಬಿಟ್ಟಿತು. ಮಳೆಯು ಬಿದ್ದುಹೋದೊಡನೆ ಸುಧಾಕರನು ದಾರಿ ತೋರುವುವದಕ್ಕಾಗಿ ದೀಪವನ್ನೆತ್ತಿದ. ಆಗ ಅವಳ ಕಣ್ಣಿನಲ್ಲಿ ನೀರುಕಂಡು "ಮಳೆ ನೋಡಿದೆ. ಮಿಂಚು ಎಲ್ಲಿ?" ಎಂದು ಕೇಳಿದ.

"ಮಿಂಚು ಇಲ್ಲಿದೆ." ಹೃದಯದ ಮೇಲೆ ಕೈಯ್ಯಿಟ್ಟು ನಿಂತುಕೊಂಡಿದ್ದ ಸುಧೆಯ ಬಾಯಿಂದ ಹೊರಬಿದ್ದಿತು. ಅವಳ ಉತ್ತರವನ್ನು ಮನಸ್ಸಿನಲ್ಲಿ ತೂಗಿ ನೋಡುವಷ್ಟರಲ್ಲಿ ದಾರಿಯಲ್ಲಿ ಯಾರೋ ಹೋಗುತ್ತಿರುವಂತೆ ಕಂಡುಬಂತು. ದೀಪ ಮುಂದೆ ಮಾಡಿ ನೋಡಿದ. ಕಾವಿ ಬಟ್ಟೆ—ಸನ್ಯಾಸಿ—ಸ್ವ[illegible]ನಂದಸ್ವಾಮಿ.

ಸ್ವಾಮಿಯವರಿಗೆ ಸುಧಾಕರನ ಗುರುತು ಹತ್ತಲು ತಡವಾಗಲಿಲ್ಲ. ಸುಧೆಯು ಹಿಂದೆಸರಿದು ಕತ್ತಲೆಯಲ್ಲಿಯೇ ನಿಂತುಕೊಂಡಿದ್ದಳು. ತಾನು ನಿನ್ನೆ ಸಂಜೆಯೇ ಬಂದು ಸಮುದ್ರದ ತೀರದಲ್ಲಿರುವ ಶಿವ ಮಂದಿರದಲ್ಲಿ ಇಳಿದುಕೊಂಡಿರುವದಾಗಿ ಸ್ವಾಮಿಯವರು ಹೇಳಿದರು. ಸುಧಾಕರನು ತಾನು ಬಂದ ಉದ್ದೇಶವನ್ನು ಹೇಳಿದ.

"ಹಾಗಾದರೆ, ನಾನೂ ಕೆಲವು ಗುಳಿಗೆಗಳನ್ನು ತೆಗೆದುಕೊಂಡು ಬರುವೆ. ಮುಂದೆ ಹೋಗು.'

"ನಾನೂ ತಮ್ಮ ಜೊತೆಯಲ್ಲಿ ಬರುವೆ. ಅಂದರೆ ಗಂಗಾಧರನ ಮನೆಗೆ ಹೋಗಲು ನಿಮಗೆ ದಾರಿ ಗೊತ್ತಾದೀತು."

"ನಾನು ಬಲ್ಲೆ. ಒಮ್ಮೆ ಒಂದು ರಾತ್ರಿ........ಇರಲಿ. ನಡೆ. ಒಂದೆರಡು ನಿಮಿಷದಲ್ಲಿಯೇ ಬಂದು ಮುಟ್ಟುವೆ." ಎಂದವರೇ ಕತ್ತಲೆಯಲ್ಲಿ ಕಾಣದಾದರು.

ಸುಧಾಕರನು ಸ್ವಾಮಿಯವರ ಅಂತರ್ಜ್ಞಾನದ ಬಗ್ಗೆ, ಸುಧೆಯು ಅವರ ಪರಿಚಿತಸ್ವರದ ಬಗ್ಗೆ ವಿಚಾರ ಮಾಡಹತ್ತಿದರು.

---

## ಪ್ರಕರಣ ೨೩.

ಸುಧೆಯು ಸುಮಾರು ಹೊತ್ತಿನ ಮೇಲೆ, "ಈ ಸ್ವಾಮಿಯವರು ಎಲ್ಲಿಯವರು? ಅವರ ಮೂಲ ಊರಾವುದು?" ಎಂದು ಕೇಳಿದಳು.

"ನದಿಯಮೂಲ, ಋಷಿಕುಲ ಕೇಳಬಾರದು" ಎಂದು ಹಳೆಯದೊಂದು ಗಾದೆಯಿದೆಯಲ್ಲವೆ? ಅದರಂತೆ ಹೂವಿನ ಗಿಡಗಳ ಹೆಸರು ಮತ್ತು ಸನ್ಯಾಸಿಗಳ ಊರನ್ನು ವಿಚಾರಿಸಬಾರದೆಂದು ಹೊಸದೊಂದು ನಾಣ್ಣುಡಿ ರೂಢಿಯಲ್ಲಿ ಬರತಕ್ಕದ್ದಿದೆ. ನನ್ನಮೇಲೆ ಸ್ವಾಮಿಯವರ ಪ್ರೇಮ ತುಂಬಾ ಇದೆ. ಎಲ್ಲ ವಿಷಯಗಳಲ್ಲಿಯೂ ಮನಬಿಚ್ಚಿ ಮಾತಾಡುತ್ತಾರೆ. ಆದರೆ ತಮ್ಮ ವಿಷಯ ಕೇಳಿದಾಗೆಲ್ಲ ಮೌನವಾಗಿ ಬಿಡುತ್ತಾರೆ."

"ಅವರ ಹತ್ತಿರ ಔಷಧ ಬಂದದ್ದಾದರೂ ಎಲ್ಲಿಂದ?"

"ಏನೋ! ಏನೋ! ಸಾವಂತವಾಡಿಯಲ್ಲಿ ನಿನಗೆ ಜ್ವರಬಂದಾಗ ತೇಯ್ದುಕೊಟ್ಟ ಬೇರು ಅವರೇ ನನಗೆ ಕೊಟ್ಟದ್ದು. ಭಿಕ್ಷೆಗೋಸ್ಕರ ಮನೆಮನೆ ತಿರುಗುವ ಅನೇಕ ಸನ್ಯಾಸಿಗಳನ್ನು ನಾವು ಕಾಣಬಹುದು. ಆದರೆ ಇನ್ನೊಬ್ಬರಿಗೆ ಔಷಧಕೊಡುವ ಸನ್ಯಾಸಿಗಳು ಅತಿವಿರಳ."

ಸುಧೆಯು ವಿಚಾರದಲ್ಲಿ ಬಿದ್ದುಬಿಟ್ಟಳು. "ಸದಾನಂದ ಸ್ವಾಮಿಯವರಿಗೆ ವೈದ್ಯಕೀಯ ಜ್ಞಾನ ಚನ್ನಾಗಿರಬೇಕೆಂದು ತೋರುತ್ತಿದೆ. ನನ್ನ ಮಾವನವರೂ ಪ್ರಸಿದ್ಧ ವೈದ್ಯರಿದ್ದರು. ವಾಲಾವಲಿಯಲ್ಲಿ ಹಾಗೂ ಈಗ ಎರಡೂ ಸಾರೆ ಕತ್ತಲೆಯ ಮೂಲಕ ಅವರ ಮುದ್ರೆ ಸ್ಪಷ್ಟವಾಗಿ ಕಾಣಲಿಲ್ಲ. ಆದರೆ ಅವರ ಸ್ವರ ಕೇಳಿದಂತೆ ಅನಿಸುತ್ತಿದೆ." ಹತ್ತು ವರ್ಷದ ಹಿಂದಿನ ಸುರಮ್ಯ ಜೀವನ ಅಷ್ಟೊತ್ತಿಗೆ ಕಣ್ಣಿಗೆ ಕಟ್ಟಿದಂತಾಯಿತು.

ಸುಧೆಯು ಜಗಲಮೇಲಿನ ಒಡ್ಡಿಯಾದ ಸೆರಗನ್ನು ಹಿಂಡಹತ್ತಿದಳು. ಸೆರಗನ್ನು ಹಿಂಡುತ್ತಿರುವಾಗ ಅರಿಯದೆ ಅವಳ ಕೈ ಕೊರಳಿನಲ್ಲಿ ಏನನ್ನೋ ಹುಡುಕಹತ್ತಿತು. ಅಲ್ಲಿ ಮಂಗಳ ಸೂತ್ರವಿದ್ದಿಲ್ಲ. ಹತ್ತುವರ್ಷದ ಹಿಂದಿನ ಜೀವನದ ನೆನಪು ಜರೇ ಆಭಾಸವಾಗಿತ್ತು. "ಸದಾನಂದ ಸ್ವಾಮಿಯವರು ಆದಿನ ನನಗೆ 'ಸೌಭಾಗ್ಯವತೀ ಭವ' ಎಂದು ಆಶೀರ್ವದಿಸಿದರು. ನಾನು ಅವಳ ಸೊಸೆಯೇ ಎಂದು ಗೊತ್ತಾದರೆ, ಆ ಆಶೀರ್ವಾದ ಸತ್ಯವಾಗುವ ಸಂಭವ ಕಂಡುಬಂದರೆ ಅವರಿಗೆ ದುಃಖವಾಗುತ್ತದೆಯೋ ಏನೋ? ನಾನು ಸೌಭಾಗ್ಯವತಿಯಾಗುವ ಆಸೆ ಹಿಡಿಯುವುದು ಅಯೋಗ್ಯವಲ್ಲವೇ? ನಿರ್ಮಾಲ್ಯದಲ್ಲಿಯ ಹೂವು ದೇವರಿಗೆ ಏರಿಸಲ್ಪಡುವದಿಲ್ಲ. ಕರಗಿಹೋದ ಹಿಮದ ರೂಪ ತಿರುಗಿ ಬಾರದು. ಅದರಂತೆಯೇ ನನ್ನ ಸೌಭಾಗ್ಯವೂ ತಿರುಗಿ ಬರಲಾರದು. ಸುಧಾಕರನು ನನ್ನನ್ನು ಸ್ವೀಕರಿಸಬಹುದು. ಆದರೆ ಅವರ ಮತ್ತು ನನ್ನ ನಡುವೆ ತೊಂದರೆಗಳ ಸಪ್ತಸಾಗರವು ಪಸರಿಸಿಕೊಂಡಿದೆ. ಅತ್ತೆ, ಮೈದುನ, ಅಣ್ಣಾ, ಅತ್ತಿಗೆ ಇವರಲ್ಲಿ ಪ್ರತಿಯೊಬ್ಬರೂ ತಮ್ಮ ತಮ್ಮ ಮನಸ್ಸಿನಂತೆ ನನ್ನ ಮುಂದೆ ತೊಂದರೆಗಳನ್ನು ತಂದೊಡ್ಡಬಹುದು. ಅಲ್ಲದೆ ಈ ಅಗ್ನಿಯಲ್ಲಿ ಸಮಾಜದ ರೋಷದೆಣ್ಣೆಯು ಬಿದ್ದೇ ಬೀಳುವದು. ಸುಧಾಕರನು ನನಗೋಸ್ಕರ ಈ ಅಗ್ನಿಯಲ್ಲಿ ಧುಮುಕಬಹುದೇ? ಒಂದು ವೇಳೆ ಅವನು ಸಿದ್ಧನಾದರೂ ನಾನು ಪುನರ್ವಿವಾಹ ಮಾಡಿಕೊಳ್ಳುವುದು ಪಾಪವೆಂದೆನಿಸಲಿಕ್ಕಿಲ್ಲವೇ?

ಪಾಪದ ವಿಚಾರ ಬಂದೊಡನೆ ಕೆಲಹೊತ್ತಿನ ಹಿಂದೆ ಕಡಕಡಿಸುತ್ತಿದ್ದ ಸಿಡಿಲು ತನ್ನ ಮೇಲೆ ಬಿದ್ದುಬಿಟ್ಟರೆ ಎಷ್ಟೋ ಒಳಿತಾಗುತ್ತಿತ್ತೆಂದು ಭಾವಿಸಿದಳು. ಆದರೆ ಸುಧಾಕರನ ನೆನಪಾದೊಡನೆ ಹಾಗಾಗದಿದ್ದುದೇ ಒಳಿತಾಯಿತೆಂದು ತಿಳಿದಳು.

ಬಡವರ ಮನೆಯ ಬಾಣಂತಿತನ ನೋಡುವ ಸಮಯ ಅವರಿಗಿನ್ನೂ ಬಂದಿರಲಿಲ್ಲ. ಅದೆಷ್ಟು ಹೃದಯಭೇದಕವಾಗಿದೆಯೆಂಬುದು ಯಮುನಿನ ಬಾಣಂತಿತನದಲ್ಲಿ ಕಂಡುಬಂದಿತು. ಬಾಣಂತಿಗಾಗಿ

ಇರಲು ಬೇರೆ ಕೋಣೆ ಇರಲಿಲ್ಲ. ನಾಲ್ಕು ಚಿಂದಿ ವಸ್ತ್ರದ ಹೊರತು ಬೇರಾವ ವಸ್ತ್ರವೂ ಇರಲಿಲ್ಲ. ಭಗಭಗನೆ ಉರಿಯುತ್ತಿರುವ ಆರು ದುಡ್ಡಿನ ಚಿಮಣಿಯೆಣ್ಣೆ ದೀಪದ ಹೊಗೆಯು ಇದ್ದಕ್ಕಿದ್ದಂತೆಯೆ ಸುಟ್ಟು ಹೋಗುವ ಬಡವರ ಆಶಾ ಚಿತ್ರವನ್ನು ಆ ಕೋಣೆಯಲ್ಲಿ ಚಿತ್ರಿಸುತ್ತಿತ್ತೋ ಯಾರು ಬಲ್ಲ? ನೆಲಕ್ಕೆ ಬಂದ ತೇವಿಸಿಂದ ಆ ಬಡವರ ದುಃಖಾಗ್ನಿಯು ಆರಿಹೋಗಲಿಕ್ಕಿಲ್ಲವೆಂದೋ ಏನೋ, ಆಕಾಶವೂ ಆ ಮನೆಯ ಗೋಡೆಯ ಮೇಲೆ ಪರ್ಜನ್ಯ ವೃಷ್ಟಿಯನ್ನು ಮಾಡುತ್ತಿತ್ತು. ತಲೆತಲಾಂತರದಿಂದ ಈ ಮನೆಯವರು ಬೆಳಗಿನಿಂದ ಬೈಗಿನ ತನಕ ಹೊಲದಲ್ಲಿ ನೀರು ಮಾಡಿದಷ್ಟು ರಕ್ತವನ್ನು ಒಂದುವೇಳೆ ರಣಾಂಗಣದಲ್ಲಿ ಸುರಿಸಿದ್ದರೆ ಈ ಬಿದ್ದ ಮನೆಯ ಬದಲು ಸರದಾರನಿಗೊಪ್ಪುವಂಥ ಸುಂದರ ಭವನದಲ್ಲಿರಬಹುದಿತ್ತು. ವಿದ್ಯಾರ್ಜನೆಗಾಗಿಯಾದರೂ ಹಾಗೆ ಶ್ರಮಿಸಿದ್ದರೆ ಅವರ ಮಣ್ಣಿನ ಪಾತ್ರೆ ಹೊನ್ನಿನ ಪಾತ್ರೆಯಾಗುತ್ತಿತ್ತು.

ಈ ಕರುಣಾಜನಕ ದೃಶ್ಯವನ್ನು ನೋಡಿ ಸುಧೆಗೆ ಅಳುವು ತಡೆಯದಾಯ್ತು. ಬಡವರ ಮನೆಯಲ್ಲಿ ಸದಾಕಾಲವೂ ಕಾಲನು ಸಣ್ಣ ಪುಟ್ಟ ಸ್ವರೂಪದಿಂದ ಸುಳಿದಾಡುತ್ತಿರುತ್ತಾನೆಂಬುದು ಗೊತ್ತಿಲ್ಲದ್ದರಿಂದ ಆ ಎಲ್ಲ ದೃಶ್ಯ ಮಸಣದ ದೃಶ್ಯದಂತೆ ಕಂಡಿತು. "ಯಮುವಿನ ಹಾಸಿಗೆಗಿಂತ ಹೆಣದ ಸಿದಿಗೆಯೇ ಅಧಿಕ ಸುಖಕರವಿರಬಹುದು; ಅವಳ ತಲೆದಿಂಬಿನ ಹತ್ತಿರ ಬಿದ್ದಿದ್ದ ಗಡಿಗೆಯು ಹೆಣದ ಹತ್ತರ ಇಟ್ಟ ಕುಂಭವಂತೆ ಅಶುಭವಾಗಿ ಕಾಣುತ್ತಿದೆ. ಅವಳ ತಲೆಯ ಬಳಿ ಕುಳಿತಿರುವ ದಮ್ಮುಹಿಡಿದ ಅವಳ ತಾಯಿ, ಮಾವ, ಮೊದಲಾದ ಮಂದಿ ಭೂತಗಳಂತೆ ಕಾಣಿಸುತ್ತಾರೆ."— ಇವೇ ಮೊದಲಾದ ಭಯಾನಕ ಕಲ್ಪನೆಗಳಿಂದ ಅವಳ ಮನಸ್ಸು ಖಿನ್ನವಾಗಿಬಿಟ್ಟಿತು. ಅವಳ ಬಡತನ ದುಡಿಮೆಯನ್ನು ಸುಧೆಯು ಅರಿತಿದ್ದಳು. ತಾನು ಸೂಲಗಿತ್ತಿಯಾಗಿದ್ದರೆ ಇವಳಿಗೆ ನೆರವಾಗಬಹುದಿತ್ತಲ್ಲ! ಎಂದು ಯೋಚಿಸಿದಳು.

"ಅಯ್ಯೋ, ನನ್ನನ್ನು ಹೊಡೆಯಬೇಡ್ರೀ" ಎಂದು ಯಮು ಚೀರಿದಳು. ಅವಳ ಗಂಡ ಹೆಂಡಕ್ಕಾಗಿ ದುಡ್ಡು ಕೊಡೆಂದು ಸಾಯಂಕಾಲ

ಬಹಳ ಹೊಡೆದಿದ್ದನೆಂದು ಯಮುವಿನ ತಾಯಿಯಿಂದ ತಿಳಿಯಿತು. ಆಕೆ ಗಡಗಡನೆ ನಡುಗುತ್ತಿದ್ದಳು. ಎರಡು ಮೂರುಸಲ ಹೀಗೆಯೇ ಚೀರಿದ ನಂತರ ಒಮ್ಮೆ ಕಣ್ಣು ತೆರೆದಳು. ಸುಧೆ, ಸುಧಾಕರರನ್ನು ಕಂಡು ಅವಳಿಗೆ ಸಂತೋಷವಾಯಿತೆಂದು ಕಣ್ಣಿನಲ್ಲಿ ಹೊರಸೂಸಿದಳು. “ಅಮ್ಮಾ, ನಾನಂತೂ ಸಾಯುವವಳೇ. ನನ್ನ ಈ ಮಗುವಿನ ಗತಿಯೇನು? ನಿಮ್ಮ ಉಡಿಯಲ್ಲಿ ಹಾಕಿದ್ದೇನೆ. ಇಂದಿನಿಂದ ನೀವೇ ಇದರ ತಂದೆ ತಾಯಿಗಳು.” ಎಂದು ಬಿಕ್ಕುತ್ತ ನುಡಿದಳು.

ಆ ಬಾಲಜೀವದ ಕಡೆಗೆ ನೋಡುತ್ತ ನೋಡುತ್ತ ಸುಧೆಯು ಮೈಮರೆತಳು. ಆ ಅರ್ಭಕನ ರೂಪದಿಂದ ಪರಮೇಶ್ವರನು ಅವತರಿಸಿರಬೇಕೆಂದು ಅವಳಿಗೆ ಭಾಸವಾಯಿತು. ಆ ಕೂಸಿನ ಸ್ಪರ್ಶದಲ್ಲಿ ನಿಜವಾಗಿಯೂ ಒಂದು ಬಗೆಯ ಮೋಹಿನಿ ಇತ್ತು. ಅವಳ ಹೃದಯ ಆತುರಗೊಳ್ಳಹತ್ತಿತು. ಅಧರವು ಸ್ಫುರಣಗೊಳ್ಳಹತ್ತಿತು. ಮೋಡದೊಳಗಿಂದ ಬರುವ ಚಂದ್ರಕಿರಣಗಳು ರಾತರಾಣಿಯ ಹೂವನ್ನು ಮೆಲ್ಲನೆ ಮುಟ್ಟುವಂತೆ ಅವಳು ತನ್ನ ತುಟಿಯನ್ನು ಅವನ ಗಲ್ಲಕ್ಕೆ ಹಚ್ಚಿದಳು. ಸುಧೆಯ ಈ ವಾತ್ಸಲ್ಯವನ್ನು ಕಂಡು ಸುಧಾಕರನ ಹೃದಯ ತುಂಬಿಬಂದಿತು. ಅವಳ ಸ್ತ್ರೀಹೃದಯದ ಪರಿಚಯ ಸುಧಾಕರನಿಗೆ ಮೊದಲೆ ಆಗಿತ್ತು. ಈಗ ಆಕೆಯ ಮಾತೃಹೃದಯದ ಕಲ್ಪನೆ ಬಂದಿತು. ಶಶಿಯ ಸೌಮ್ಯಪ್ರಕಾಶವು ಸೂರ್ಯನ ಪ್ರಖರ ಪ್ರಕಾಶವನ್ನು ಅವಲಂಬಿಸಿರುವಂತೆ ರಮಣೀ ಹೃದಯದ ರಮ್ಯತ್ವದ ಉಗಮ ಸ್ತ್ರೀಯರ ಮಾತೃಹೃದಯದಲ್ಲಿಯೇ ಅಡಕವಾಗಿರುತ್ತದೆಂಬ ತತ್ವ ಆ ಅನಾಮಿಕ ಮಗುವನ್ನು ಮುದ್ದಿಟ್ಟಾಗಲೆ ಸ್ಪಷ್ಟವಾಗಿ ಕಾಣಹತ್ತಿತು. ಮೊದಲು ಪಲ್ಲವ, ಆಮೇಲೆ ಪುಷ್ಪ, ಕೊನೆಗೆ ಕಾಯಿ—ಹೀಗೆ ವೃಕ್ಷವು ವಿಕಾಸ ಹೊಂದುತ್ತದೆ. ಅದರಂತೆ ಸ್ತ್ರೀಹೃದಯ ವಿಕಾಸಕ್ಕೂ ಕನ್ಯಾಪ್ರೇಮ, ರಮಣೀಪ್ರೇಮ, ಮತ್ತು ಮಾತೃಪ್ರೇಮಗಳೆಂಬ ಮೂರು ಮೆಟ್ಟಿಲುಗಳು ಇರುತ್ತವೆ. ವಾತ್ಸಲ್ಯ, ಶೃಂಗಾರ ಹಾಗೂ ಭಕ್ತಿ ಇವುಗಳ ತ್ರಿವೇಣಿ ಸಂಗಮವೇ ಸ್ತ್ರೀಜೀವನ. ಜಗತ್ತು ಬಿಳೇ ಬಣ್ಣಕ್ಕೆ ಮೋಸಬೀಳುತ್ತಿದೆ. ಸುಂದರ ಕಣ್ಣು ಮೂಗುಗಳನ್ನು ನೋಡಿ ಸಂತೋಷಪಡುತ್ತಿದೆ. ಲಾವಣ್ಯಕ್ಕೆ

ಮರುಳಾಗಿ ಹೋಗುತ್ತಿದೆ. ಈ ಎಲ್ಲ ಬಾಹ್ಯಗುಣಗಳಿಗೆ ಹೇಗೆ ಹೃದಯವಿಲ್ಲದೆ ಬೆಲೆ ಇಲ್ಲವೋ, ಹಾಗೆ ಸ್ತ್ರೀಗೆ ವೇಷ, ಅಲಂಕಾರ, ಕಲೆ ಮೊದಲಾದ ವಿಷಯಗಳಲ್ಲಿ ಆಸಕ್ತಿಯಿದ್ದರೂ ಅವಳ ಅಂತಃಕರಣದಲ್ಲಿ ಭಕ್ತಿಯಿರದಿದ್ದರೆ ವ್ಯರ್ಥವೇ ಸರಿ. ಸುಧೆಯ ಹೃದಯದಲ್ಲಿಯ ಈ ದಿವ್ಯ ಭಕ್ತಿಯ ದರ್ಶನವಾದೊಡನೆಯೆ ಸುಧಾಕರನ ಅಂತಃಕರಣದ ತೃಷೆಯು ಶಾಂತವಾಯಿತು. ಮದುವೆಯಾದರೆ ಸುಧೆಯನ್ನೇ ಆಗುವೆನೆಂಬರ್ಥದ ಪ್ರತಿಜ್ಞೆಯು ಅವನ ಹೃದಯದಲ್ಲಿ ಒಂದೇಸವನೆ ಸುಳಿದಾಡಹತ್ತಿತು.

ಅಷ್ಟೊತ್ತಿಗೆ ಯಮುನೆಯ ತಾಯಿಯ ಆಮಂತ್ರಣದ ಮೇರೆಗೆ ಒಬ್ಬ ಮಂತ್ರವಾದಿಯು ಬಂದಿದ್ದ. ಆತ ತಾಯಿ ಮಗುವಿಗೆ ಮಂತ್ರ ಹಾಕಬೇಕಾದುದರಿಂದ ಸುಧೆಯು ಮಗುವನ್ನು ಕೆಳಗಿಟ್ಟಳು. ಮಂತ್ರಿಸಿ ಬಾಣಂತಿಯ ತಲೆಬುಡದಲ್ಲಿಡಲು ಬಂಗಾರದ ಚೂರು ಮಾಂತ್ರಿಕನಿಗ ಬೇಕಾಗಿತ್ತು. ಕವಡಿ ಕಾಸಿಲ್ಲದ ಮನೆಯಲ್ಲಿ ಬಂಗಾರವೆಲ್ಲಿಂದ ಬರಬೇಕು? ಸುಧಾಕರನೇ ತನಗೆ ಸಾಂಗಲಿ ಗೆಳೆಯರು ಕೊಟ್ಟ ಉಂಗುರವನ್ನು ತೆಗೆದು ಕೊಟ್ಟ. ಅದನ್ನು ಮಂತ್ರಿಸಿ ಅವಳು ಮಲಗುವಲ್ಲಿ ಇಡಲಾಯಿತು

ಸದಾನಂದ ಸ್ವಾಮಿಯವರು ಬಂದು ಹೊರಗಿನಿಂದಲೇ ಸುಧಾಕರನನ್ನು ಕರೆದು ಔಷಧ ಕೊಟ್ಟು ಅನುಪಾನ ಹೇಳಿದರು. ಎಷ್ಟೇ ಹೇಳಿಕೊಂಡರೂ ಸದಾನಂದ ಸ್ವಾಮಿಯವರು ಒಳಗೆ ಬರಲಿಲ್ಲ. ಹೊರಗಿನಿಂದಲೇ ಒಳಗೆ ದೃಷ್ಟಿ ಹಾಕಿದರು. ಅವರ ಕಣ್ಣೊಳಗಿಂದ ನೀರು ಹರಿಯಹತ್ತಿತು. ಮುಖವು ಬಾಡಿ ಹೋಯಿತು. ಅವರು ಸುಧಾಕರನೊಡನೆ ಏನೊಂದೂ ಮಾತನಾಡದೆ ಹೊರಟು ಹೋದರು.

ಯಮುನೆಗೆ ಒಂದು ಗುಳಿಗೆ ಕೊಟ್ಟು, ಅವಳ ತಾಯಿಗೆ ಯಾವ ಯಾವ ಹೊತ್ತಿಗೆ ಔಷಧ ಕೊಡಬೇಕೆಂಬುದನ್ನು ತಿಳಿಸಿ ಹೊರಬೀಳುವುದಕ್ಕೂ, ಬಾಗಿಲಲ್ಲಿ ಗಂಗಾಧರನು ಬರುವುದಕ್ಕೂ ಗಂಟೇ ಬಿದ್ದಿತು. "ಯಾರಿಲ್ಲಿ ನಿಮಗ ಬರಲು ಹೇಳಿದವರು?" ಎಂದು ಮುಂತಾಗಿ ಒದರಾಡಹತ್ತಿದ ಆದರೆ ಅವನೊಡನೆ ಮಾತನಾಡುವುದರಲ್ಲಿ ಅರ್ಥವಿಲ್ಲೆಂದು ಸುಧಾಕರನು ಮುಂದೆ ನಡೆದ ಸುಧೆಯೂ ಹಿಂಬಾಲಿಸಿದಳು. ಅವನ್ನು ಕಂಡು ಗಂಗಾಧರನು "ಹಃ! ಹಃ!" ಎಂದು ತಲೆಯಲ್ಲಾಡಿಸಿದನು.

ಜಗನ್ನಾಥನು ಮಾತ್ರ ಗಂಗಾಧರನ ಹಿಂದೆ ನಿಂತು ನಗುತ್ತಿದ್ದ. ಸುಧಾಕರನಿಗೆ ಜಗನ್ನಾಥನ ಕುಟಿಲ ನೀತಿಯು ಅರ್ಥವಾಯಿತು. ತಾನು ಬರುವ ಸುದ್ದಿಯನ್ನು ಗಂಗಾಧರನಿಗೆ ತಿಳಿಸುವದಕ್ಕೋಸ್ಕರ ಆತನು ನೇರವಾಗಿ ರಾವಸಾಹೇಬರ ಮನೆಗೆ ಹೋಗಿರಬೇಕೆಂದು ಊಹಿಸಿದನು.

ಇತ್ತ ಬಯ್ಯುತ್ತ ಒಳಹೊಕ್ಕಿದ ಗಂಗಾಧರನನ್ನು ಕಂಡೊಡನೆಯೇ ಯಮುನಾ ಚೀರಿ ಎಚ್ಚರದಪ್ಪಿದಳು. ಗಂಗಾಧರನು ಅವಳ ತಲೆಗಿಂಬಿನ ಬಳಿ ಹೋಗಿ ಕುಳಿತ. ತುಸುಹೊತ್ತಿನಲ್ಲಿಯೇ ಬೆಳಗಾಗಲಿರುವುದನ್ನು ಕಂಡು ಯಮುನಾಳ ತಾಯಿ ಅಲ್ಲಿಂದ ಎದ್ದಳು. ಗಂಗಾಧರನ ತಂದೆಯು ಗುಡುಗುಡಿ ಸೇದುವುದಕ್ಕೋಸ್ಕರ ದೂರ ಹೋಗಿ ಕುಳಿತನು. ಗಂಗಾಧರನು ತನ್ನ ಕಡೆಗೆ ಯಾರೂ ನೋಡುವದಿಲ್ಲೆಂದು ಖಾತ್ರಿಯಾದೊಡನೆ ಯಮುನಾಳ ತಲೆದಿಂಬಿಗಿದ್ದ ಉಂಗುರವನ್ನು ಎತ್ತಿ ಕಿಸೆಯಲ್ಲಿ ಹಾಕಿಕೊಂಡನು

× × × × +

ಸುಧೆಯು ಏಳು ಬಡಿಯುವಷ್ಟರಲ್ಲಿಯೇ ತನ್ನ ಮನೆ ಮುಟ್ಟಿದ್ದರಿಂದ ಸುಧಾಕರನಿಗೆ ಅಷ್ಟು ಮಟ್ಟಿಗೆ ಚಿಂತೆ ಕಡಿಮೆಯಾಯಿತು. ತಾಯಿಯು ಮುಂಪೆ ಯಮುನಾಳ ಮನೆಯಲ್ಲಿ ಕಂಡ ಸ್ಥಿತಿಯನ್ನೆಲ್ಲ ವರ್ಣಿಸಿದಾಗ ತಾಯಿ ಕಣ್ಣೀರೊರಸಿಕೊಳ್ಳುತ್ತಾ "ನಿನ್ನೆ ಸಂಜೆ ತನಕಾ ಕೆಲಸಮಾಡುತ್ತಿದ್ದಳು ಹುಡುಗಿ, ಪಾಪ!" ಎಂದಳು.

"ಇವನ್ನೆಲ್ಲ ಕಂಡು ಮನಸ್ಸು ರೋಸಿಹೋಗಿದೆ. ದಿನ ತುಂಬುತ್ತ ಬಂದಿದ್ದರೂ ಎಡೆಯೊಡೆಯುವ ತನಕ ಕೆಲಸ ಮಾಡುತ್ತಿರಬೇಕು, ಹಂಡ ಗುಡುಕ ಗಂಡನ ಕಡೆಯಿಂದ ಸಾಯುವ ತನಕ ಬಡತ ತಿನ್ನಬೇಕು. ಆಗದ ಹಾಸಿಗೆ ಹಿಡಿದರೆ ಮಧ್ಯಾಹ್ನದ ಗಂಜಿಗೂ ಗತಿಯಿಲ್ಲದಾಗಬೇಕು, ಇಂತಹ ಅಳುಬುರುಕ ಸೌಭಾಗ್ಯಕ್ಕಿಂತ ಅಮಂಗಲಕರ ವೈಧವ್ಯವೇ ಮೇಲೆಂದು ಯಮುನೆಗೆ ಅನಿಸಿದರೆ ತಪ್ಪಾರದು?"

ತಾಯಿ ಏನೂ ಅನ್ನಲಿಲ್ಲ. ಸುಧಾಕರನ ತೀವ್ರ ಶಬ್ದಗಳಲ್ಲಿಯ ಸತ್ಯ ಆಕೆಗೆ ವಿದಿತವಾಗಲಿಲ್ಲವೆಂದಲ್ಲ; ಆದರೆ ಇಂತಹ ದುಷ್ಟ ಗಂಡ

ನ ಹೆಂಡಂದಿರು ಏನು ಮಾಡಬೇಕೆಂಬ ಬಗ್ಗೆ ಅವರಿಂದ ನಿಶ್ಚಿತವಾಗಿ ಹೊರಡುವುದು ಸಾಧ್ಯವಿದ್ದಿಲ್ಲ. ಊರಲ್ಲಿಯೇ ಜಗನ್ನಾಥನಿಗೆ ಕೆಲಸ ಕೊಡಿಸಿದರೆ ಯಮುವಿನ ಕಷ್ಟ ಕಡಿಮೆಯಾದೀತೆಂದು ಅವರಿಬ್ಬರೂ ಕೊನೆಗೆ ಒಂದು ತೀರ್ಮಾನಕ್ಕೆ ಬಂದರು.

ಸಾಲೆಗೆ ಹೋದೊಡನೆಯೇ, ಅಗಸ್ಟ ಮೊದಲನೇ ತಾರೀಕು ಟಿಳಕರ ಪುಣ್ಯಾತಿಥಿಯೆಂಬುದು ನೆನಪಾಯಿತು. ಆತನು ಉಳಿದ ಶಿಕ್ಷಕರ ಮುಂದೆ "ಕೊನೆಯ ತಾಸಿನಲ್ಲಿ ಲೋಕಮಾನ್ಯರ ಅಲೌಕಿಕತ್ವ" ಎಂಬ ವಿಷಯದ ಮೇಲೆ ಯಾರಾದರೂ ಮಾತನಾಡಬೇಕೆಂದು ಸೂಚಿಸಿದನು.

"ರಾವಸಾಹೇಬರಿಗೆ ಟಿಳಕರ ಹೆಸರೇ ಸೇರದು. ಅವರಂತೂ ಅಧ್ಯಕ್ಷರಾಗುವ ಹಾಗಿಲ್ಲ" ಎಂದು ದಾದಾಸಾಹೇಬರೆಂದರು.

"ಸಭೆಗೆ ವ್ಯಾಖ್ಯಾನ ಬೇಕೇ ಹೊರತು ಖುರ್ಚಿಯ ಮೇಲೆ ತೂಕಡಿಸುವವರಲ್ಲ."

"ಸುಧಾಕರ, ಸಂಸ್ಥೆಯ ದೃಷ್ಟಿಯಿಂದಲೂ ನಾವು ವಿಚಾರ ಮಾಡಬೇಕು. ಎಷ್ಟೆಂದರೂ ಸರಕಾರದ ಉಪ್ಪುಣ್ಣುತ್ತಲಿದ್ದೇವೆ. ಸರಕಾರಕ್ಕೆ ಟಿಳಕರ ಹೆಸರೆಂದರೆ ಆಗದು." ಮಧುಕರನು ಓರ್ವ ಮುತ್ಸದ್ದಿಯಂತೆ ನುಡಿದ.

"ಸರಕಾರದ ಉಪ್ಪುಂಡ ಮಾತ್ರಕ್ಕೆ ನಮ್ಮ ಬುದ್ಧಿಯನ್ನೇನೂ ಮಾರಿಕೊಳ್ಳಬೇಕಾಗಿಲ್ಲ. ಹಿಂದೆ ಆಗರಕರ ದಿನಾಚರಣೆಯನ್ನೂ ಮಾಡಿಲ್ಲವೇ?"

"ಆಗರಕರರು ಸಮಾಜ ಸುಧಾರಕರಿದ್ದರು. ಆದರೆ ಟಿಳಕರು ರಾಜಕೀಯ ಸುಧಾರಕರು."

"ಒಟ್ಟಿನ ಮೇಲೆ ಇಬ್ಬರೂ ಸುಧಾರಕರೇ ಅಲ್ಲವೇ? ಪ್ರತಿಯೊಬ್ಬ ಸುಧಾರಕನೂ ಆದರ್ಶನೆಂದು ವಿದ್ಯಾರ್ಥಿಗಳಿಗೆ ಮನದಟ್ಟು ಮಾಡಿಕೊಡಬೇಕು. ರೂಢಿಯ ಪಾಶ-ಹಾಗೂ ಪಾರತಂತ್ರ್ಯದ ಪಾಶ ಇವು ಎರಡೂ ಒಂದೇ. ಗುಲಾಮಗಿರಿಯನ್ನು ಒದೆಯುವ ಪ್ರತಿಯೊಬ್ಬ ವಿಭೂತಿಯೂ ತರುಣರಿಗೆ ವಂದ್ಯನೇ. ಕುರುಡರ ಸಾಲಿನಂತೆ ನಡೆಯದೆ ಕಣ್ಣು

ತೆರೆದು ಎಲ್ಲ ಸಂಗತಿಗಳನ್ನು ಅವಲೋಕಿಸಬೇಕು; ಸಾಮಾಜಿಕ ಅನ್ಯಾಯವೇ ಇರಲಿ, ರಾಜಕೀಯವೇ ಇರಲಿ, ಅದನ್ನು ಸಮೂಲ ನಾಶ ಮಾಡಬೇಕು. ಸ್ವತಂತ್ರ ವಿಚಾರದ ಭಟ್ಟಿಯಲ್ಲಿ ಆಚಾರದ ಚಿನ್ನವನ್ನು ಚೆನ್ನಾಗಿ ಪರೀಕ್ಷಿಸಿ ಆ ಚಿನ್ನದಿಂದ ಅಲಂಕಾರ ಮಾಡಿಸಿ ಅದನ್ನು ಮಾತೃಭೂಮಿಯ ಕೊರಳಿನಲ್ಲಿ ಹಾಕತಕ್ಕದ್ದು"

"ಅದನ್ನು ಮಾತೃಭೂಮಿಯ ಕೊರಳಲ್ಲಿ ಹಾಕಿ, ಇಲ್ಲವೆ ತಮ್ಮ ಕೊರಳಿಗೇ ಹಾಕಿಕೊಳ್ಳಿ. ಸಂಜೆ ವ್ಯಾಖ್ಯಾನವಾಗಲಿಕ್ಕಿಲ್ಲೆಂಬ ಧೂರ್ತತೆಯಿಂದ ಈಗಲೇ ಮುಗಿಸಿಬಿಟ್ಟಂತೆ ಕಾಣುತ್ತಿದೆ." ಮಧುಕರನು ಚೇಷ್ಟೆಗಾಗಿ ನುಡಿದ.

ಉಗಿಬಂಡಿಯು ವೇಗದಿಂದ ಹೋಗುತ್ತಿರುವಾಗ ಮುಂದಿನ ರಸ್ತೆ ಅಗಿಯಲ್ಪಟ್ಟಿದೆಯೆಂದು ಕಂಡಾಗ ಡ್ರಾಯ್ವರನ ಮನಸ್ಥಿತಿಯಾಗುವಂತೆ ಸುಧಾಕರನ ಗತಿಯಾಯಿತು. ಆತನಿಂದ ಮಾತೇ ಹೊರಡಲಿಲ್ಲ. ಶರೀರಕ್ಕೆ ಔಷಧ ಹಚ್ಚುವ ಮೊದಲು ಆಯೋಡಿನ ಹಚ್ಚಿ ಚರ್ಮವನ್ನು ನಿರ್ಜೀವವಾಗಿ ಮಾಡುವಂತೆ ದಾದಾಸಾಹೇಬರು ಸರಕಾರಿ ಸಹಾಯದ ಆವಶ್ಯಕತೆಯನ್ನು ವರ್ಣಿಸಿ ಶಾಲೆಯಲ್ಲಿ ತಿಳಕರ ಪುಣ್ಯತಿಥಿಯನ್ನು ಆಚರಿಸುವುದು ಸಾಧ್ಯವಿಲ್ಲವೆಂದು ಹೇಳಿಬಿಟ್ಟರು. ಸುಧಾಕರನು ಅದೆಷ್ಟೋ ಯುಕ್ತಿವಾದ ಮಾಡಿದನು ತಿಳಕರ ರಾಜಕೀಯ ಜೀವನವನ್ನು ವರ್ಣಿಸುವದಿಲ್ಲವೆಂದು ಒಪ್ಪಿಕೊಂಡನು. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಹಗ್ಗಕ್ಕೆ ಸರ್ಪವೆಂದು ಭಾವಿಸಿ ಗಡಗಡನೆ ನಡುಗುವ ಜನರಿಗೆ ಹಗ್ಗ ಚಿಕ್ಕದಿದ್ದರೂ ಅಷ್ಟೇ; ದೊಡ್ಡದಿದ್ದರೂ ಅಷ್ಟೇ! ಚಿಕ್ಕದಿದ್ದರೆ ಅದು ಸರ್ಪವಿರಲಿಕ್ಕಿಲ್ಲ. ಆದರೂ ಹಾವು ಇರಲೇಬೇಕು ಎನ್ನುವರು. ಇಂಥವರಿಗೆ ತಿಳಿಸಿ ಹೇಳುವದೆಂತು?

ನಡುವಿನ ಬಿಡುವಿನಲ್ಲಿ ಸುಧಾಕರನು ಓದುತ್ತ ಕುಳಿತಾಗ ದಾದಾಸಾಹೇಬರು ಒಂದು ವಂತಿಗೆಯ ಪಟ್ಟಿಯನ್ನು ತಂದರು. ಅದು ಕವಿವರ್ಯ ಅಣ್ಣಾಪ್ಪ ತನಯರ ದ್ವಿತೀಯ ವಿವಾಹದ ಸಹಾಯಾರ್ಥವಾಗಿದ್ದಿತು. ಅದಕ್ಕೆ ಮಧುಕರ ದೇಸಾಯಿ ಐವತ್ತು ರೂಪಾಯಿ ಕೊಟ್ಟಿದ್ದ.

"ಕಳೆದ ತಿಂಗಳು ಸತ್ತ ಹೆಂಡತಿಯನ್ನು ಕುರಿತು ಕಾವ್ಯಬರೆದು ಮಾರಾಟ ಮಾಡಲು ಬಂದವನ ಫಂಡು ಅಲ್ಲವೇ ಇದು?"

"ಹೌದು"

"ಆ ಪದ್ಯಗಳಲ್ಲಿ ವರ್ಣಿತವಾದವಷ್ಟೆಲ್ಲ ಗಾಳಿಗೋಪುರವಾಯಿತಲ್ಲ!

"ಪತ್ನಿಯಿಲ್ಲದಿದ್ದರೆ ಕವಿಯ ಸ್ಫೂರ್ತಿ ಕುಂಠಿತವಾಗುತ್ತಿದೆ."

"ಹಾಗಾದರೆ ಹೆಂಡಂದಿರ ಸಂಖ್ಯೆ ಬೆಳೆದಂತೆ ಸ್ಫೂರ್ತಿಯೂ ಬೆಳೆಯುತ್ತದೇನು?"

ಮಧುಕರನಿಗೆ ಕೋಪಬಂದಿದೆಯೆಂದು ಸುಧಾಕರನಿಗೆ ತಿಳಿದರೂ ಆತ ತನ್ನ ಮಾತನ್ನೇ ಮುಂದುವರಿಸಿದ.

"ಇಂತಹ ಬಾಡಿಗೆ ಕವಿಗಳ ಎರಡನೇ ಲಗ್ನಕ್ಕೆ ನೆರವಾಗುವದೆಂದರೆ ಪಾಪ!"

"ಸುಧಾಕರ, ಕೊಡುವದಿಲ್ಲವಾದರೆ ಇಲ್ಲವೆನ್ನು; ಸುಮ್ಮನೆ ನನ್ನ ಗೆಳೆಯನನ್ನು ಟೀಕಿಸಬೇಡ."

"ಬೆಳಗಾಂವದ ಅಣ್ಣಾಪ್ಪತನಯರ ದ್ವಿತೀಯ ಸಂಬಂಧಕ್ಕೆ ಜಯಗಾಂವದ ಸಾಲೆ ಮಾಸ್ತರರೇಕೆ ದಂಡ ತೆರಬೇಕು? ಇನ್ನು ಅವನ ಮಗನ ನಾಮಕರಣದ ಫಂಡು—ಇತ್ಯಾದಿ ಅನೇಕ ಫಂಡು ತೆಗೆಯಬಹುದಲ್ಲ!"

"ಅವರೆಂತಹ ಫಂಡು ತೆಗೆದರೂ ನೀವು ಕಿಸೆಯಿಂದ ಪೈಯನ್ನೂ ತೆಗೆಯದಿದ್ದರಾಯಿತಲ್ಲ."

"ತೆಗೆಯುವ ಕಾರಣವೇನಿದೆ? ಇನ್ನೊಬ್ಬರಿಗೆ ಕಲ್ಲೆಸೆಯುವವರಿಗೆ ಕಲ್ಲು ಕೂಡಿಸಿ ಕೊಡುವದಕ್ಕಿಂತ ಯಾವುದಾದರೊಂದು ಕಟ್ಟಡಕ್ಕೆ ಬೇಕಾದರೆ ಹೊತ್ತು ತೆಗೆದುಕೊಂಡು ಹೋಗುವೆ. ಅಣ್ಣಾಪ್ಪತನಯರ ದ್ವಿತೀಯ ವಿವಾಹಕ್ಕಿಂತ ಇನ್ನಾವ ಬಾಲವಿಧವೆಯ ವಿವಾಹ ಮಾಡಿಸಿದರೆ ಸಹಾಯ ಮಾಡಲು ಒಂದೇ ಕಾಲಮೇಲೆ ಸಿದ್ಧನಿದ್ದೇನೆ."

"ಓಹೋ! ಇನ್ನೊಂದು ಕಾಲು ಎಲ್ಲಿಯಾದರೂ ಇನ್ನೊಂದು ಕುಮಾರಿಕೆಯ ಉದ್ಧಾರಕ್ಕೆ ಹೋಗಿದೆಯೆಂದು ಕಾಣುತ್ತಿದೆ. ನಿಮ್ಮಲ್ಲಿ ಈ ಪುನರ್ವಿವಾಹದ ಮೇಲಿನ ಪ್ರೀತಿಯು ಎಂದಿನಿಂದ ಹುಟ್ಟಿದೆಯೆಂದು ನಾ ಬಲ್ಲೆ."

ಸುಧಾಕರನ ತೀವ್ರ ದೃಷ್ಟಿಕ್ಷೇಪದಿಂದ ಮಧುಕರನ ಬಾಯಿಬಂದಾಗಿಬಿಟ್ಟಿತು ಸಂಜೆ ಮನೆಗೆ ಬಂದವನೇ ಕಾಳೆಗೊಂದು ಪತ್ರಬರೆದು ಮುಗಿಸಿದ. ಎರಡುತಿಂಗಳ ಹಿಂದೆ ಸಾಲೆಯ ಚಿತ್ರವನ್ನು ಎಷ್ಟು ರಮ್ಯ ಹಾಗೂ ಉದಾತ್ತವಾಗಿ ಚಿತ್ರಿಸಿದನೋ, ಈಗ ಅದನ್ನು ಅಷ್ಟೇ ವಿಡಂಬನೆ ಮಾಡಿದ್ದ. ಅಶೋಕ ಪುಷ್ಪವು ದೂರದಿಂದ ಅತಿಸುಂದರವಾಗಿ ಕಾಣುತ್ತಿದೆ ಹತ್ತಿರ ಹೋದಾಗ ಕೆಂಪು ಇರಿವೆಯ ಕಾಟಕ್ಕೆ ಮೈ ಕೊಡಬೇಕಾಗುತ್ತಿದೆ. ಸಮುದ್ರದಲ್ಲಿ ಈಸಲು ಬಿದ್ದ ಹೊರತು ನೀರೊಳಗೆ ಅಡಗಿರುವ ಬಂಡೆಯ ಕಲ್ಪನೆಯಾಗದು. ಅದರಂತೆ ಪ್ರತ್ಯಕ್ಷವಾಗಿ ವ್ಯವಹಾರದ ಕಣದಲ್ಲಿಳಿದ ಹೊರತು ಧ್ಯೇಯಕ್ಕೆದುರಾಗಿ ಬರುವ ತೊಂದರೆಗಳು ಗೊತ್ತಾಗುವದಿಲ್ಲ. ಸುಧಾಕರನು ಕಾಳೆಗೆ ಬರೆದ ಪತ್ರದ ರೀತಿ ಈ ಕೆಳಗಿನಂತೆ.

ಶ್ರೀ

ಜಯಗಾಂವ

೧ ಆಗಸ್ಟ ೧೯೩೫

ನಮಸ್ತೇ! ನಿನ್ನ ಪತ್ರ ಮುಟ್ಟಿತು. ಮೊದಲೇ ಚಿತ್ರಕಾರ,ಅದರಲ್ಲಿಯೂ ಪ್ರೇಮ ಪ್ರವಾಹ; ಅಂದಮೇಲೆ ತೇಲುತ್ತ ಹೋಗಿ ಕಾವ್ಯದ ಸುಳಿಯಲ್ಲಿ ಸಿಲುಕಿಕೊಂಡದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಆದರೆ ಮೈಮರೆಯಬೇಡ. ಕವಿತೆಯೂ ಹೋಗಿ, ತರುಣಿಯೂ ಜಾರಿ, ನಪಾಸಿನ ಪದವಿ ಕೊರಳಿಗೆ ಬಿದ್ದೀತು. ಜೋಕೆ! ಗಾಯನದಂತೆ ಸೌಂದರ್ಯವೂ ವಿಲಕ್ಷಣ ಪ್ರಭಾವಶಾಲಿಯೆಂಬುದನ್ನು ಒಪ್ಪುತ್ತೇನೆ. ಹೆಂಡತಿಯಲ್ಲಿ ಮಕ್ಕಳಲ್ಲಿ ಎಂಬ ವೇದಾಂತ ಹೇಳುತ್ತಲಿದ್ದರೂ ಪ್ರತಿಯೊಬ್ಬನು ಹೆಂಡಿರು ಮಕ್ಕಳಿಗಾಗಿ ಕಷ್ಟಪಡುತ್ತಿರುತ್ತಾನೆ. ಪ್ರೀತಿಯ ಕಟಾಕ್ಷದಲ್ಲಿ

ಅಸಿಧಾರೆಯಿದೆಯೆಂದು ವಿದಿತವಾದರೂ ಆ ಕಟಾಕ್ಷಕ್ಕೀಶ್ವರ ತರುಣನು ಪ್ರಾಣಕೊಡುವದಕ್ಕೆ ಹಿಂಜರಿಯುವದಿಲ್ಲ. ಆದರೆ ಅವಸರದ ಹೊಟ್ಟೆಯಲ್ಲಿ ಪಶ್ಚಾತ್ತಾಪವಿದೆ. ಕಪಿಂಜಲನು ಪುಂಡರೀಕನಿಗೆ "ಗೆಳೆಯಾ, ಆಕೆಯನ್ನು ವರಿಸಲು ನೀನಾವ ಮದನ? ಆಕೆಗೆ ಅಂಜಲು ಆಕೆಯೆಷ್ಟು ಕಲಿತವಳು?" ಎಂದಂತೆ ನಾನೂ ನಿನಗೆ ಉಪದೇಶ ಮಾಡಬೇಕಾಗುತ್ತಿದೆ. ಬಾಣಕಾದಂಬರಿಯನ್ನು ಬೇಕಾದರೆ ಕಳಿಸುತ್ತೇನೆ. ಪೂರ್ಣ ನೋಡಿಕೊಳ್ಳಬಹುದು. ಆದರಿಂದ ಪುಂಡರೀಕನಿಗೆ ಕಪಿಂಜಲನ ಉಪದೇಶದ ಪರಿಣಾಮ ಎಳ್ಳಷ್ಟೂ ಆಗಲಿಲ್ಲವೆಂದು ಸಿದ್ಧ ಮಾಡಲಿಕ್ಕೆ ನಿನಗೆ ಅವಕಾಶವಾದೀತು. ಕಾದಂಬರಿಯಲ್ಲಿಯ ಕಪಿಂಜಲನಿಗೆ ಕೊನೆಗೆ ಪುಂಡರೀಕನ ವತಿಯಿಂದ ಮಹಾಶ್ವೇತೆಯ ಬಳಿ ವಿನಂತಿ ಮಾಡಿಕೊಳ್ಳುವ ಸಂಧಿ ಸಿಕ್ಕಿತು. ಆದರೆ ನಿನ್ನ ಮಹಾಶ್ವೇತೆ ಎಲ್ಲಿರುವಳೆಂಬುದು ನಿನಗಾಗಲೀ, ನನಗಾಗಲೀ ಗೊತ್ತಿರದ್ದರಿಂದ ಆ ವಿಷಯದಲ್ಲಿ ನನಗೆ ಕಾದಂಬರಿಯಲ್ಲಿಯ ಕಪಿಂಜಲನ ಕೆಲಸ ಮಾಡಲು ಸಾಧ್ಯವಿಲ್ಲದುದಕ್ಕೆ ವಿಷಾದವಾಗುತ್ತಿದೆ!"

ಬಾಣ ಕಾದಂಬರಿಯಲ್ಲಿಯ ಕಪಿಂಜಲನು ಶಾಪದಿಂದ ಕುದುರೆಯಾದನು. ಆದರಂತೆ ನನ್ನದೂ ರೂಪಾಂತರವಾಗುತ್ತ ನಡೆದಿದೆ. ಗೆಳೆಯನಿಗೆ ಉಪದೇಶ ಮಾಡುವಾಗ ಪ್ರತಿಯೊಬ್ಬನೂ ಕಪಿಂಜಲನಾಗುತ್ತಾನೆ. ಮತ್ತು ತನ್ನ ಮಹಾಶ್ವೇತೆಯು ಕಣ್ಣಿಗೆ ಬೀಳಲು ಪುಂಡರೀಕನ ಮೈಯ್ಯಲ್ಲಿ ಸಂಚರಿಸಿ ಬಿಡುತ್ತಾನೆ. ಕಳೆದ ಎರಡು ತಿಂಗಳಿಂದ ನಾನು ಇಬ್ಬರು ಹುಡುಗಿಯರನ್ನು ಕಲಿಸುತ್ತಿದ್ದೇನೆಂದು ನಿನಗೆ ಗೊತ್ತೇ ಇದೆ. ಅವರಲ್ಲಿ ಒಬ್ಬಳ ಮೇಲೆ...... ನಮ್ಮ ಮದುವೆಗೆ ಅನೇಕ ವಿಘ್ನಗಳಿವೆ. ಆಶೆಯ ಹಾರಾಟವು ಜೋರಾಗುತ್ತ ಹೋದಂತೆ ನಿರಾಶೆಯ ಅಧಃಪಾತದ ಹೊಡೆತವು ಹೆಚ್ಚಾಗುತ್ತಿದೆ. ಬೇಗನೇ ನಾನೊಂದು ನಿರ್ಣಯಕ್ಕೆ ಬರಬೇಕೆಂದಿದ್ದೇನೆ. ಅನುಕೂಲ ನಿರ್ಣಯವಾದರೆ ನಿನಗೆ ತಾರಿನಿಂದ ಬೇಕಾದರೂ ತಿಳಿಸುತ್ತೇನೆ. ಆದರೆ ಪ್ರತಿಕೂಲವಾಗುವ ಭಯವೇ ಅಧಿಕವಿದ್ದುದರಿಂದ ಪತ್ರದಲ್ಲಿ ಅವಳನ್ನು ಭಾವೀ ಪತ್ನಿಯೆಂದು ಕರೆಯುವುದು ಸಮಂಜಸವಲ್ಲ ನನ್ನ ಸಂಕೋಚ ಸ್ವಭಾವದ ಕಲ್ಪನೆ ನಿನಗೆ

ಚೆನ್ನಾಗಿ ಇದ್ದುದರಿಂದ ಈ ರಹಸ್ಯದ ಬಗ್ಗೆ ನೀನು ನನ್ನನ್ನು ಮನ್ನಿಸುವಿಯೆಂದು ನನಗೆ ತುಂಬಾ ಆಸೆಯಿದೆ.

ಪ್ರಿಯ ಗೆಳೆಯಾ, ಮನುಷ್ಯನ ಮನಶ್ಚಕ್ಷುವು ಅನುಭವದಿಂದಲೇ ತೆರೆಯುತ್ತದೆಂಬುದು ಸುಳ್ಳಲ್ಲ. ಹಳ್ಳಿಪಳ್ಳಿಯಲ್ಲಿಯ ಬಡಬಗ್ಗರಿಗೆ ಶಿಕ್ಷಣ ದೊರೆತೊಡನೆ ದೇಶದ ಸುಧಾರಣೆಯಾಯಿತೆಂದು ನಾನು ಪುಸ್ತಕದಿಂದ ಹಾಗೂ ಗೆಳೆಯರೊಡನೆ ನಡೆಯಿಸಿದ ಚರ್ಚೆಯಿಂದ ದೃಢಪಡಿಸಿಕೊಂಡಿದ್ದೆ. ನಾಲ್ಕು ತಿಂಗಳ ಹಿಂದೆ ದೇಶದ ಸುಧಾರಣೆಯ ಮುಗಿಲು ಮುಟ್ಟಿಸುವ ಈ ಮಂದಿರದ ಮೇಲೆ ಹತ್ತಿ ನಾನು ಆಕಾಶವನ್ನು ಮುಟ್ಟಿಯೇ ಬಿಡುವೆನೆಂದು ತಿಳಿದಿದ್ದೆ. ಆದರೆ ಕಳೆದ ಕೆಲವು ತಿಂಗಳುಗಳ ಅನುಭವದ ತೆರೆಗಳು ಈ ಮಂದಿರವು ಉಸುಕಿನದೆಂದು ಸಿದ್ಧ ಮಾಡಿದವು.

ಪ್ರತಿಯೊಂದು ಹೊಸ ಅನುಭವವು ಈ ಮಂದಿರದ ಅಂತಸ್ತನ್ನು ಕೆಡವಿ ಹಾಕುತ್ತಿತ್ತು. ಹೀಗಾಗಿ ಮಂದಿರವು ಮೇಲಾಗುವುದನ್ನು ಬಿಟ್ಟು ಕೆಳಗಿಳಿಯತೊಡಗಿದೆ. ಇನ್ನು ಒಂದೆರಡು ಹೊಡೆತ ಬಿದ್ದರೂ ಸಾಕು, ಅದು ಕುಸಿದೇ ಬೀಳುವುದು.

ವ್ಯಾಯಾಮ ಶಾಲೆಗೆ ಕೂಡಿಸಿದ ಹಣದಿಂದ ಕ್ಲಬ್ಬು ಸ್ಥಾಪನೆಯಾಗಲಿದೆ. ವಿದ್ಯಾರ್ಥಿಗಳ ಶರೀರ ಸಂಪತ್ತನ್ನು ಬೆಳಸುವುದರಲ್ಲಿ ಶಾಲೆಗೆ ಒಂದಿಷ್ಟೂ ಲಕ್ಷ್ಯವಿಲ್ಲ. ಇನಸ್ಪೆಕ್ಟರರು ಬಂದಾಗ ಬಾಲವೀರರ ಪಥಕ ಒಂದೆರಡು ಕವಾಯಿತು ತೋರಿಸಿ ಬಿಟ್ಟರೆ ಶಿಕ್ಷಕರ ಕೆಲಸ ಮುಗಿಯಿತು. ಪಾಲಕರು ಫೀಗೆ ಹೊಣೆಗಾರರು. ಶಿಕ್ಷಕರು ಗಿಳಿಪಾಠದ ಚಾಲಕರು. ಆಳವಾದ ನೀರಲ್ಲಿ ಹೋಗಲು ಯಾರಿಗೂ ಮನಸ್ಸಿಲ್ಲ. ಹದಿನೈದು ಹದಿನಾರು ವಯಸ್ಸಿನ ವಿದ್ಯಾರ್ಥಿಗಳ ಕೊರಗಿದ ದೇಹ, ಬಿಳುಪೇರಿದ ಮುದ್ರೆಯನ್ನು ನೋಡಿದರೆ ಹಿಂದುಸ್ತಾನದ ಭಾವೀ ದುರ್ಗತಿಯನ್ನು ನೆನೆದು ಕಣ್ಣೀರಿಡುವಂತಾಗುತ್ತಿದೆ. ಸುವರ್ಣದ್ವಾರಕೆಯನ್ನು ಕಂಸನನ್ನು ಕೊಲ್ಲಬಲ್ಲ ಶ್ರೀ ಕೃಷ್ಣನೊಬ್ಬನೆ ಕಟ್ಟಬಲ್ಲನು. ಅದು ದುರ್ಬಲ ಸುದಾಮನಿಂದ ಸಾಧ್ಯವೇ?

ಶರೀರ ಸಂಪತ್ತಿನೊಡನೆ ಹುಡುಗರ ಸದ್ಗುಣ ಸಂಪತ್ತಿನ ಬೆಳವಣಿಗೆಯು ಚನ್ನಾಗಿ ಆಗಬೇಕು. ಆದರೆ ಟಿಳಕರ ಪುಣ್ಯಾತಿಥಿಯನ್ನು ಆಚರಿಸಲು ಅಂಜುವ ಶಿಕ್ಷಕರ ಶಿಷ್ಯರು ಎಷ್ಟು ಮಟ್ಟಿಗೆ ಧೈರ್ಯಶಾಲಿಗಳಾಗಬಹುದೆಂಬುದರ ಭವಿಷ್ಯ ಹೇಳಲು ಜ್ಯೋತಿಷಿಯ ಅಗತ್ಯವಿಲ್ಲ. ಮಧುಕರನಂತಹ ಕವಿಗಳು ವರ್ಗದೊಳಗೆ ಯಾವಾಗಲೂ ಚನ್ನಾಗಿ ಶೃಂಗಾರ ಮಾಡಿಕೊಂಡು ಬರುತ್ತಾರೆ. ಅಂದಮೇಲೆ ವಿದ್ಯಾರ್ಥಿಗಳಿಗೆ ಹೊಸ ಹೊಸ ಉಡುಪಿನ ಹುಚ್ಚು ಹತ್ತಿಬಿಟ್ಟರೆ ಅದರಲ್ಲಿ ಆಶ್ಚರ್ಯವೇನು? ಶಿಕ್ಷಕರು ಸಿಗರೇಟಿನಿಂದ ಕಪ್ಪಿಟ್ಟ ತುಟಿಯಿಂದ ಬೇಕಾದಷ್ಟು ಧೂಮ್ರಪಾನ ನಿಷೇಧ ಮಾಡಿದರೂ ಅದರ ಪರಿಣಾಮ ಹುಡುಗರ ಮೇಲೆ ಹೇಗಾಗಬಹುದು? ಪುಸ್ತಕದ ಹೊರಗೆ ಹೆಜ್ಜೆ ಇಡಲು ಶಿಕ್ಷಕರೇ ಸಿದ್ಧರಿಲ್ಲದಿದ್ದಾಗ ವಿಧವಿಧ ವಿಷಯಗಳ ಗಂಗೆಗಳ ಮಂಗಳ ಸಂಗಮದಲ್ಲಿ ವಿದ್ಯಾರ್ಥಿಗಳೆಂತು ಸಮರಸರಾಗಬಲ್ಲರು? ಹೇಗಾದರೂ ಪಾಸಾದರೆ ಸಾಕೆಂದು ಅವರಿಗೆ ಅನಿಸಿದಲ್ಲಿ ತಪ್ಪೇನು? ಶಿಕ್ಷಕರ ಈ ಬಗೆಯ ಧಂದೆಯ ಮೂಲಕ ವಿದ್ಯಾರ್ಥಿಗಳಿಗೆ ಸಾಲೆಯ ವಿಷಯದಲ್ಲಿ ತನ್ನತನ ತೋರುವುದು ಶಕ್ಯವಿಲ್ಲ. ಇದರಿಂದ ಸಾಲೆಯಿಂದ ಹೊರಬೀಳುವವರು ಹುಲಿಗಳಾಗಿರದೆ ಇಲಿಗಳಾಗುತ್ತಾರೆ.

ಟಿಳಕ ಆಗರಕರರು ಸಾಲೆಯನ್ನು ಸ್ಥಾಪಿಸಿಯೇ ದೇಶಸೇವೆಯ ಪ್ರಾರಂಭ ಮಾಡಿದರು. ಅವರ ಅಂತರಂಗದಲ್ಲಿ ಸ್ವಾರ್ಥತ್ಯಾಗದ ಜ್ಯೋತಿಯು ಉರಿಯುತ್ತಿತ್ತು. ಅವರ ರೋಮರೋಮಗಳಲ್ಲಿ ಸ್ವಾಭಿಮಾನವು ಸ್ಫೂರ್ತಿಗೊಳ್ಳುತ್ತಿತ್ತು. ಹಾಗೂ ಹುಡುಗರಲ್ಲಿ ಸ್ವಾತಂತ್ರ್ಯದ ಕಿಡಿಯನ್ನು ಹೊತ್ತಿಸುವಷ್ಟು ತೇಜ ಅವರಲ್ಲಿತ್ತು. ಜಯಗಾಂವದ ಸಾಲೆಯು ಅವರ ಸಾಲೆಯನ್ನು ಹೋಲುತ್ತದೆಂದು ಹೇಳಿದರೆ ದಾರವು ತನ್ನನ್ನು ಚಿನ್ನದ ಸರಿಗೆಯೆಂದು ಭಾವಿಸಿಕೊಂಡಂತೆಯೇ. ಖಾಸಗೀ ಸಾಲೆಯಲ್ಲಿ ಶಿಕ್ಷಕರು ಕಡಿಮೆ ಸಂಬಳದ ಮೇಲೆ ಇರುತ್ತಾರೆ. ಯಾಕೆಂದರೆ ಅವರಿಗೆ ಇನ್ನೆಲ್ಲಿಯೂ ಹೆಚ್ಚಿಗೆ ಪಗಾರ ದೊರೆತಿರುವದಿಲ್ಲ. ಹೊಟ್ಟೆಗೋಸ್ಕರ ಸೈನ್ಯಕ್ಕೆ ಸೇರುವ ಹೇಡಿ ಸೈನಿಕನು ಅದಾವ ಪರಾಕ್ರಮ ತೋರಬಲ್ಲ? ಖಾಸಗೀ ಸಾಲೆಯ ಶಿಕ್ಷಕರ ಗತಿಯೂ ಹೀಗೇ ಆಗಿದೆ.

ಅವರಲ್ಲಿ ಟಿಳಕ ಆಗರಕರರ ವಿದ್ವತ್ತೆಯಿಲ್ಲ, ಸ್ವಾರ್ಥತ್ಯಾಗವಿಲ್ಲ; ದೇಶಭಕ್ತಿಯಿಲ್ಲ; ಕರ್ತವ್ಯನಿಷ್ಠೆಯಿಲ್ಲ. ಮನೆಯಲ್ಲಿಯೇ ಕುಳಿತು ಚಹಾ ಕುಡಿದು, ವರ್ತಮಾನ ಪತ್ರ ಓದಿ, ಟೆನ್ನಿಸ ಆಡಿ ಯಾವುದಾದರೂ ಕೆಲಸ ಮಾಡಿ ಹೊಟ್ಟೆ ಹೊರಕೊಳ್ಳುವದಷ್ಟೇ ಇವರಿಗೆ ಗೊತ್ತು. ಮುಂದಿನ ಪೀಳಿಗೆಯು ರಕ್ತ ಕುದಿಯುತ್ತಿರಬೇಕೆಂಬ ಇಚ್ಛೆ ಇದ್ದರೆ, ಅದನ್ನು ತಯಾರಿಸುವುದಕ್ಕೋಸ್ಕರ ಇಂದಿನ ಪೀಳಿಗೆಯು ತನ್ನ ರಕ್ತ ಬತ್ತಿಸಬೇಕೆಂಬ ತತ್ವ ಯಾರಲ್ಲಿಯೂ ಇಲ್ಲ.

ಕುರುಡನನ್ನು ಹಿಂಬಾಲಿಸಿದ ಕುರುಡನಂತೆ ನಿಶ್ಚಿತ ಮಾರ್ಗದಿಂದ ಹೋಗುವ ಇಚ್ಛೆ ನನಗಿಲ್ಲ. ಸಾಂಗಲಿಯ ಘಟ್ಟದಲ್ಲಿ ನಮ್ಮ ಮಾತುಕತೆಯಾದಾಗ "ಆಯುಷ್ಯದಲ್ಲಿ ಅನೇಕ ಕಾಂಚನಮೃಗಗಳು ನಮ್ಮನ್ನು ಮೋಸಗೊಳಿಸುತ್ತವೆ. ಆದರೆ ಅವುಗಳ ಸತ್ಯಸ್ವರೂಪ ಗೊತ್ತಾಗಲು ಅವನ್ನು ಹಿಂಬಾಲಿಸಬಾರದು" ಎಂದು ನಾನು ಹೇಳಿದ್ದೆ. ಸದ್ಯದ ಸಾಲೆಗಳಲ್ಲಿ ಶಿಕ್ಷಕರಾಗಿ ಸಮಾಜದ ಉತ್ಕೃಷ್ಟ ಸೇವೆ ಮಾಡುವದೆಂದರೆ ಸೀತೆಗೋಸ್ಕರ ಕಾಂಚನಮೃಗವನ್ನು ಬೆನ್ನಟ್ಟಿ ಸೀತೆಯನ್ನು ಕಳಕೊಂಡಂತೆಯೇ ಸರಿ.

ಇರಲಿ. ಇನ್ನು ಮುಂದೇನು ಮಾಡಬೇಕೆಂಬ ಬಗ್ಗೆ ಯೋಚಿಸುತ್ತಿದ್ದೇನೆ. ಒಂದುವೇಳೆ ನನ್ನ ಗುರಿಯನ್ನು ಮುಟ್ಟುವ ದಾರಿ ಸಿಕ್ಕರೂ ಸಿಗಬಹುದು; ಇಲ್ಲವೆ ಇನ್ನೊಂದು ಕಾಂಚನಮೃಗದ ಮೋಹದಲ್ಲಿ ಸಿಲುಕಿ ಸುಮ್ಮನೆ ಬೆನ್ನಟ್ಟಿ ನಿಷ್ಫಲನೂ ಆಗಬಹುದು.

ತಾಯಿಯ ಆರೋಗ್ಯ ಕೆಟ್ಟಿದೆ. ಸದಾನಂದ ಸ್ವಾಮಿಯವರು ಈಗಷ್ಟೇ ಇಲ್ಲಿ ಬಂದಿದ್ದಾರೆ. ಅವರಿಗೆ ವನಸ್ಪತಿ ಹಾಗೂ ಔಷಧದ ಸೂಕ್ಷ್ಮಜ್ಞಾನ ಚನ್ನಾಗಿ ಇದೆ. ಅಮ್ಮನಿಗೆ ಅವರಿಂದ ಔಷಧ ಕೊಡಿಸಬೇಕೆಂದಿದ್ದೇನೆ.

ಸಾಲೆಯ ವಿಷಯದಲ್ಲಿ ಇನ್ನೂ ಎಷ್ಟೋ ಬರೆಯಬೇಕೆಂದೆನಿಸುತ್ತಿದೆ. ಆದರೆ ಲೆಕ್ಕಣಿಕೆಯನ್ನು ಬೇಕಷ್ಟು ಸಡಿಲು ಬಿಟ್ಟರೂ ಅದು ನಾಲಿ

ಗೆಯನ್ನು ಸರಿಗಟ್ಟಲಾರದು. ನಿನ್ನ ಅಭ್ಯಾಸ ಕೆಡುವ ಭಯವಿದ್ದಿಲ್ಲವಾದ
ರೆ ಇಲ್ಲಿಗೇ ಬಾರೆಂದು ಬರೆಯುತ್ತಿದ್ದೆ. ನಿನಗೆ ತಾಯಿಯ ಆಶೀರ್ವಾದ.

ಸದೈವ ನಿನ್ನವನೇ ಆದ
ಸುಧಾಕರ.

## ಪ್ರಕರಣ ೨೪.

ಮಾರನೆ ದಿನ ನಸುಕಿನಲ್ಲಿ ಸ್ವಾಮಿಗಳ ದರ್ಶನಾರ್ಥವಾಗಿ ಶಿವ ಮಂದಿರಕ್ಕೆ ಹೋಗಬೇಕೆಂದು ಸುಧಾಕರನು ಬಯಸಿದಾಗ ಸುಧೆಯೂ ತಾನೂ ಬರುವೆನೆಂದಳು. ಸುಧೆಗೆ ಒಯ್ಯಬೇಡವೆಂದು ತಾಯಿಯೂ ಸ್ಪಷ್ಟವಾಗಿ ಹೇಳದಿದ್ದರೂ ಆಕೆಯ ಒಪ್ಪಿಗೆಯಿಲ್ಲವೆಂದು ಮುಖಮುದ್ರೆಯಿಂದ ಗೊತ್ತಾಗುತ್ತಿತ್ತು. ಅಲ್ಲದೆ ಜನವಾದರೂ ಏನೆಂದುಕೊಂಡಾರು ? ತಂಗಿಯಲ್ಲ; ಹೆಂಡತಿಯಲ್ಲ, ದೂರದ ಸಂಬಂಧವೂ ಇಲ್ಲ. ಇಂತಹಳನ್ನು ಕರೆದುಕೊಂಡು ಸಮುದ್ರದ ತೀರಕ್ಕೆ ಆಡ್ಡಾಡಲು ಹೋಗುವುದು ಸಮಂಜಸವಲ್ಲವೆಂಬುದು ಆತನ ಮನಸ್ಸಿಗೆ ಗೋಚರವಾಯಿತು. ಆದರೆ ಸುಧೆಯ ಮನಸ್ಸು ಮುರಿಯುವುದು ಸಾಧ್ಯವಿಲ್ಲದ್ದರಿಂದ ಆವಳನ್ನು ಕರೆದೊಯ್ದನು.

ಮುಂಜಾನೆಯ ಆ ಪ್ರಶಾಂತ ಸಮಯದಲ್ಲಿ ಇಡೀ ಸೃಷ್ಟಿಯು ರಜನೀ ಮಾತೆಯನ್ನು ಸಂಪೂರ್ಣವಾಗಿ ಅಪ್ಪಿಕೊಂಡು ಮಲಗಿತ್ತು. ನಡು ನಡುವೆ ಕೇಳಿ ಬರುವ ಕೋಳಿಯ ಕೂಗಿನ ಹೊರತು ಮತ್ತಾವ ಸಪ್ಪಳವೂ ಕೇಳಿಸುತ್ತಿರಲಿಲ್ಲ. ಸೂರ್ಯದರ್ಶನದೊಡನೆ ಅರಳುವ ಕಮಲದಂತೆ ವಿಶ್ವವು ತನ್ನ ಪಕಳೆಗಳನ್ನೆಲ್ಲ ಮುದುಡಿಸಿಕೊಂಡಿತ್ತು. ಗಿಡ-ಆವುಗಳ ಎಲೆ, ಪಕ್ಷಿ, ಮನೆ ಇವೆಲ್ಲವುಗಳ ಮೇಲೆ ಯಾರಾದರೂ

ಮೋಹಿನೀ ಮಂತ್ರವನ್ನೆರಚಿದಂತೆ ಭಾಸವಾಗುತ್ತಿತ್ತು. ಬೆಳಗಿನ ತಂಗಾಳಿಯು ಭಟ್ಟಿಂಗಿಯಂತೆ ಯಾವುದೋ ಗೀತವನ್ನು ಹಾಡುತ್ತ ಕಲಿಕೆಯ ಕಿವಿಗೆ ಬಂದು ಬಡಿಯುತ್ತಿತ್ತು. ಆದರೆ ನಿದ್ದೆ ಪೂರ್ಣವಾಗದ್ದರಿಂದ ಒಂದು ಮಗ್ಗುಲಿಂದ ಇನ್ನೊಂದು ಮಗ್ಗುಲಾಗುತ್ತಿತ್ತು. ಈ ಸಮಯದಲ್ಲಿ ನಡೆಯುವವನಿಗೆ ತಾನು ಅಮೃತ ಪ್ರವಾಹದೊಳಗಿಂದ ಸಾಗುತ್ತಿದ್ದೇನೆಂದು ಅನಿಸಬಹುದಾಗಿತ್ತು. ಹಗಲು ನವರಸಗಳ ಪ್ರವಾಹದಲ್ಲಿ ಮುಳುಗೇಳುತ್ತಿರುವ ಜಗತ್ತು ಬೇಸತ್ತು ಈ ಸಮಯದಲ್ಲಿ ಶಾಂತಿರಸದ ಅನುಭವಹೊಂದುತ್ತಿತ್ತು.

"ಇಂತಹ ಸಮಯದಲ್ಲಿ ನಮಗೆ ಚಿಕ್ಕಂದಿನ ನೆನಪಾಗುತ್ತದಲ್ಲವೇ?"

"ಆಹುದು, ಅದಕ್ಕೂ ಹಿಂದಿನ ನೆನಪೂ ಬರುತ್ತಿದೆ."

ಸುಧಾಕರನ ಮನೆಯಿಂದ ಸಮುದ್ರವು ಅಷ್ಟೇನೂ ದೂರವಿರಲಿಲ್ಲ. ಶಿವಮಂದಿರವು ದಂಡೆಗೆ ಸಮೀಪವಿರುವ ಒಂದು ಚಿಕ್ಕ ದಿನ್ನೆಯ ಮೇಲಿತ್ತು. ದಿನ್ನೆಯನ್ನೇರುವ ಮೊದಲು ಅವರಿಬ್ಬರು ದಂಡೆಯಮೇಲೆ ಹೋಗಿ ನಿಂತರು. ಸಾಗರವು ಅವರ ಪಾದಪ್ರಕ್ಷಾಲನ ಮಾಡಹತ್ತಿತು. ಉಕ್ಕಿಬರುವ ತೆರೆಗಳನ್ನು ಕಂಡು ಅವರಿಬ್ಬರ ಮನಸ್ಸಿನಲ್ಲಿ "ಪಾಪ, ಇದಕ್ಕೆ ಎಂತಹ ದುಃಖವಾಗುತ್ತಿರಬಹುದು?" ಎಂಬ ವಿಚಾರ ಏಕಕಾಲಕ್ಕೆ ಉದ್ಭವಿಸಿತು.

"ಈ ದೃಶ್ಯ ಎಷ್ಟು ಸುಂದರವಿದೆ? ಸಮುದ್ರ ಅಮೃತ ಕೊಟ್ಟಿತೆಂಬುದು ಬರೀ ಪುರಾಣದ ಕತೆಯಲ್ಲ. ಇವರ ತೆರೆಗಳಲ್ಲಿ- ತುಷಾರಗಳಲ್ಲಿ-ಗರ್ಜನೆಯಲ್ಲಿ-ಎಲ್ಲದರಲ್ಲಿಯೂ ಅಮೃತ ತುಂಬಿದೆ. ಸಮುದ್ರವನ್ನು ಕಂಡೊಡನೆ ನನಗೆ ಧ್ಯೇಯವಾದಿ ಮಹಾತ್ಮನ ನೆನಪು ಬರುತ್ತಿದೆ ತನ್ನ ಕ್ಷಾರಮಯ ಜೀವನವನ್ನು ಮಧುರಗೊಳಿಸಬೇಕೆಂದು ಎಂದೂ ಹಾರೈಸಿದ್ದಿಲ್ಲ. ಆದರೆ ಆಕಾಶದಲ್ಲಿಯ ನಿರ್ಜಲ ಮೋಡಗಳಿಗೆ ಮಧುರ ಜಲ ದೊರಕಬೇಕೆಂದು ಮಾತ್ರ ಆದರ ಅಂತಃಕರಣ ಹಗಲಿರುಳು ತಳಮಳಗೊಳ್ಳುತ್ತಿರುತ್ತದೆ."

"ಸಮುದ್ರವನ್ನು ಕಂಡೊಡನೆ ನನಗೆ ಬೇರೊಂದು ಕಲ್ಪನೆ ಬರುತ್ತಿದೆ. ಸೃಷ್ಟಿ ನಿರ್ಮಾಣಮಾಡಿದ ಮೇಲೆ ದೇವರಿಗೆ ಇನ್ನಾವ ಕೆಲಸ ಮಾಡಬೇಕೆಂಬ ಯೋಚನೆ ಹುಟ್ಟಿಕೊಂಡಿತು. ಹೂವಿನಲ್ಲಿರೋಣವೆಂದರೆ ಜನರು ಕೊಯ್ದು ಬಿಡುತ್ತಾರೆ. ಗಿರಿಶಿಖರದ ಮೇಲಿದ್ದರೂ ಜನದ ಕಾಟ ತಪ್ಪುವಂತಿಲ್ಲ. ಕೊನೆಗೆ ದೇವರು ಬೇಸತ್ತು ಸಮುದ್ರವನ್ನು ನಿರ್ಮಿಸಿ ಅದರ ತಳಕ್ಕೆ ಹೋಗಿ ಮಲಗಿಬಿಟ್ಟನು."

ಸುಧೆಯ ಕಲ್ಪನೆ ಸುಧಾಕರನಿಗೆ ಹಾಸ್ಯಾಸ್ಪದವೆನಿಸಲಿಲ್ಲ. ಆದರೆ ಅದರಲ್ಲಿ ಒಂದು ಬಗೆಯ ರಹಸ್ಯವಿದೆಯೆಂದು ಅವನಿಗೆ ಭಾಸವಾಯಿತು. ಸುಧಾಕರನು "ಇಲ್ಲಿ ತುಸು ಕುಳಿತುಕೊಳ್ಳೋಣ" ಎಂದು ಸೂಚಿಸಲು ಸುಧೆಯು ನೀರಿನಿಂದ ಮೇಲೆ ಬಂದಳು. ಇಬ್ಬರೂ ತುಸುಹೊತ್ತು ಉಸುಕಿನಲ್ಲಿ ಗೀಚುವುದರಲ್ಲಿಯೇ ಕಳೆದರು. ಹೇಗೆ ಮಾತನ್ನು ಪ್ರಾರಂಭಿಸಬೇಕೆಂಬುದೇ ಇಬ್ಬರಿಗೂ ಹೊಳೆಯಲೊಲ್ಲದು. ಕೊನೆಗೆ ಸುಧೆಯು ಸಮುದ್ರದ ಕಡೆ ನೋಡುತ್ತಾ,

"ಕಲಿಯುವುದು ಒಳಿತೋ, ಹಾಳೋ?" ಎಂದು ಕೇಳಿದಳು.

"ಕಲಿಯುವುದರಲ್ಲೇನು ಕೆಡುಕಿದೆ? ಜೇನುತುಪ್ಪ ಕಹಿಯಾಗುವದೇ?" ಕೆಲಹೊತ್ತು ನೀರವತೆ. ಆಮೇಲೆ ಸುಧೆಯು ಒಮ್ಮೆಲೇ ಕೇಳಿದಳು.

"ಪಾಪವೆಂದು ಯಾವುದಕ್ಕೆ ಅನ್ನುವರು?"

ಸುಧಾಕರನು ಚಕಿತನಾದನು ಸುಧೆಯ ಮುಖದಿಂದ ಲೆಕ್ಕ ಮಾಡಿ ಶಬ್ದಗಳು ಹೊರಬೀಳುವಂತಿದ್ದರೂ ಅವಳ ಹೃದಯದೊಳಗೆ ದೊಡ್ಡ ಬಿರುಗಾಳಿ ಎದ್ದಿರಬೇಕೆಂದು ಅವನು ಗೊತ್ತುಹಚ್ಚಿದನು ಹೃದಯ ಮತ್ತು ವ್ಯವಹಾರಗಳ ತಿಕ್ಕಾಟದಲ್ಲಿ ಈ ಕೋಮಲ ಬಾಲಿಕೆಗೆ ಎಷ್ಟು ಕಷ್ಟವಾಗುತ್ತಿರಬಹುದೆಂಬ ಕಲ್ಪನೆ ಅವನಿಗಾಯಿತು. ಮನಸ್ಸು ಎಳೆದರೆ ಅದಕ್ಕೆ ಪಾಪವೆನ್ನುತ್ತಾರೆ. ಈಗಿನ ಕಾಲದಲ್ಲಿ ರಾಜದ್ರೋಹ ಎನ್ನಿಸಿಕೊಳ್ಳುವ ತಪ್ಪು ಮುಂದೆ ಗೌರವಿಸಲ್ಪಡುವಂತೆ ಇಂದಿನ ಪಾಪವೂ ಮುಂದೆ ಕ್ರಾಂತಿಯೆನಿಸಿಕೊಂಡೀತು. ಸುಧೆಯನ್ನು ಯಾವ ಬಗೆ

ಯಿಂದ ಸಮಾಧಾನಪಡಿಸಬೇಕೆಂಬುದು ಗೊತ್ತಾಗದ್ದರಿಂದ ಸುಧಾಕರನು ವಿಚಾರಮಗ್ನನಾದನು. ಆದರೆ ಆತನ ಮೌನದಿಂದ ಸುಧೆಯು ಇನ್ನಷ್ಟು ಭಯಭೀತಳಾಗಿ ಕಾತರದಿಂದ "ನಾನು ಪಾಪಮಾಡುತ್ತಿರುವೆನಲ್ಲವೆ?"

"ಹಾಗೆ ಯಾರೆಂದರು?"

"ನನ್ನ ಮನಸ್ಸು."

"ಮನಸ್ಸು ಚಿಂತಿಸುವುದನ್ನು ವೈರಿಯೂ ಬಗೆಯುವದಿಲ್ಲ."

ಸುಧೆಯು ಸುಮ್ಮನಾದಳು. ಆದರೆ ಸವಿಯಾದ ಮಾತಿನಿಂದ ಹೃದಯದಲ್ಲಿಯ ಉರಿಯು ಆರಿಹೋಗುವದಿಲ್ಲೆಂಬುದು ಅವಳ ಮುದ್ರೆಯ ಮೇಲಿಂದ ಸ್ಪಷ್ಟವಾಗಿ ತೋರುತ್ತಿತ್ತು. ಅವಳು ತನ್ನ ಸೆರಗಿನಿಂದೊಂದು ಪತ್ರ ತೆಗೆದು,

"ನಾನು ಈ ಪತ್ರವನ್ನೋದಿ ಜೀವಕೊಡುವ ವಿಚಾರ ಬಿಟ್ಟೆ. ಆದರೆ ಕೇವಲ ಬದುಕಿರುವುದರಲ್ಲಿ ನನಗೆ ಎಳ್ಳಷ್ಟೂ ಸಂತೋಷವಿಲ್ಲ. ನಾನು ಎಲ್ಲರಿಗೂ ಭಾ... ರ."

ಅವಳ ದನಿ ನಡುಗಿತು. ಕಣ್ಣಿನಲ್ಲಿ ನೀರೂರಿತು.

"ನೀನು ಎಲ್ಲರಿಗೆ ಭಾರವಾಗಿದ್ದರೂ ನನಗೆ ಹೂವಿನಷ್ಟು ಹಗುರ. ಜಗತ್ತು ಬೇಕಾದರೆ ಕಾಲಿನ ಧೂಳಿಯಂತೆ ಜಾಡಿಸಿ ಬಿಡಲಿ. ಆದರೆ ಪಾರಿಜಾತಕ ಪುಷ್ಪದಂತೆ ನಿನ್ನನ್ನು ಎತ್ತಿ ಇಡಬೇಕೆಂಬುದಿಷ್ಟೇ ನನ್ನ ಇಚ್ಛೆ.'

ಸುಧೆಯ ಕೈ ಸುಧಾಕರನ ಪ್ರೇಮ ಸ್ಪರ್ಶದಿಂದ ಒಂದೇ ಸವನೆ ಕಂಪಿಸ ಹತ್ತಿತು. ಸುತ್ತಲಿನ ಪೃಥ್ವಿಯೆಲ್ಲ ಗರಗರನೆ ತಿರುಗುವಂತೆ ಅನಿಸಿತು. ಅವಳು ತಡವರಿಸುತ್ತ,

"ವಿಧವೆಯು ಯಾರಿಗೋಸ್ಕರ ಬದುಕಬೇಕು?"

"ಅವಳನ್ನು ಅತಿಶಯ ಪ್ರೀತಿಸುವವನ ಸಲುವಾಗಿ. ಸುಧಾ, ನೀನು ಬದುಕುವಿಯಲ್ಲವೇ? ನಿಜ ಹೇಳು. ನನ್ನ ಕೊರಳಾಣೆ ಇದೆ ನಿನಗೆ."

"ಕೊರಳಾಣೆ ಕೊಡುವವರು ಚಿಕ್ಕಮಕ್ಕಳು."

"ನಾನಾದರೂ ಎಲ್ಲಿ ದೊಡ್ಡವನಿದ್ದೇನೆ? ಸಾವಿರಾರು ವರ್ಷದ ಈ ಆಕಾಶವನ್ನು ನೋಡಿದರೆ ನಾನು ಚಿಕ್ಕವನೇ ಅಲ್ಲವೇ? ಸುಧಾ, ವಯಸ್ಸು ಎಷ್ಟೇ ಆದರೂ ಮನಸ್ಸಿನಿಂದ ಚಿಕ್ಕವರಾಗಿರುವುದರಲ್ಲಿಯೇ ಸರ್ವ ಸುಖವಿರುತ್ತದೆ. ನಾನು ಚಿಕ್ಕವನಿದ್ದುದರಿಂದಲೇ ಇನ್ನೂ ಆಡುವ ಪ್ರವೃತ್ತಿ ತೊಲಗಿಲ್ಲ. ಆದರೆ ಒಬ್ಬನೇ ಆಡುವದೆಂದರೆ ಬೇಸರ. ಸುಧಾ, ನೀನು ನನ್ನೊಡನೆ ಆಡಲು ಬರುವಿಯಲ್ಲವೇ? ನಡಿ; ನೀನೂ ನಾನೂ ಕೂಡಿ ಒಂದು ಉಸುಕಿನ ಮನೆ ಕಟ್ಟೋಣ."

ಸುಧಾಕರನು ಚಿಕ್ಕ ಹುಡುಗನಂತೆ ಉಸುಕನ್ನಗೆದು ಅದರಿಂದ ಮನೆಕಟ್ಟಹತ್ತಿದನು. ಸುಧೆಯೂ ನೆರವಾದಳು. ಕ್ಷಣಾರ್ಧದಲ್ಲಿ ಮನೆ ಸಿದ್ಧವಾಯಿತು.

"ಸುಧಾ, ಈ ಮನೆ ಯಾರದು?"

ಸುಧೆಯು ಏನೂ ಮಾತಾಡಲಿಲ್ಲ. ಸುಧಾಕರನ ಕಡೆ ಲಜ್ಜಾದೃಷ್ಟಿ ಬೀರಿ ನಕ್ಕಳು. ಮಾತ್ರ. ಆವಳಿಗೆ ಎದುರಿನ ಸಮುದ್ರಕ್ಕಿಂತ ತನ್ನ ಅಂತ:ಕರಣ ಅಧಿಕವಾಗಿ ಉಕ್ಕಿ ಬಂದಿದೆಯೆಂದು ಭಾಸವಾಯಿತು.

"ಸುಧಾ, ಇನ್ನು ಮುಂದೆ ನೀನು ದೇಹತ್ಯಾಗದ ವಿಷಯ ಎತ್ತಲಿಕ್ಕಿಲ್ಲವಷ್ಟೇ! ಸಂಸಾರ ಸಾಗರದಲ್ಲಿ ನೌಕಾವಿಹಾರದ ಸಂದರ್ಭ ದೊರೆಯಲಿ- ಇಲ್ಲವೆ ಒಡಕು ಹಲಿಗೆಯ ಮೇಲೆ ತೇಲಾಡುವ ಪಾಳಿಯೇ ಬರಲಿ-ನೀನು ಜೊತೆಗಿದ್ದ ಮೇಲೆ ಸಂತೋಷದಿಂದ ನನ್ನ ಕಾರ್ಯ ಸಾಗುವದು."

ಸುಧೆಗೆ ಸರ್ವವಿಶ್ವವು ಸುಧಾಕರಮಯವಾದಂತೆನಿಸಿತು. ಆವಳಿಗೆ ಆಕಾಶದಲ್ಲಿ ಸುಧಾಕರನ ಸುಂದರ ಕೂದಲು, ಸಾಗರದಲ್ಲಿ ಅವನ ಕಣ್ಣೊಳಗಿನ ನೀರು, ಬದಿಯಲ್ಲಿರುವ ದಿನ್ನೆಯಲ್ಲಿ ಅವನ ಸಶಕ್ತ ಕೈ, ಮೈಯಲ್ಲಿ ನವಜೀವನವನ್ನು ತುಂಬುತ್ತಿರುವ ಪ್ರಭಾತ ವಾಯುವಿನಲ್ಲಿ ಅವನ ದಯಾಳು ಹೃದಯ ಕಂಡಿತು. ತಾನು ವಿಧವೆ ಸ್ತ್ರೀಯೆಂಬುದನ್ನು ಮರೆತುಬಿಟ್ಟಳು. ಆವಳಲ್ಲಿಯ ಆತ್ಮ ತತ್ವವು ನಾಮರೂಪ

ವನ್ನು ತ್ಯಜಿಸಿ ಸುಧಾಕರನ ಆತ್ಮದೊಡನೆ ಏಕರೂಪವಾಗಿ ಬಿಟ್ಟಿತು. ಆಕೆ ಸುಧಾಕರನಿಂದ ಅನತಿದೂರದಲ್ಲಿ ಕುಳಿತಿದ್ದರೂ ಅವನ ಹೃದಯ ದಲ್ಲಿಯೇ ಇದ್ದೇನೆಂದು ಅನಿಸಹತ್ತಿತು. ಅವಳ ಹೃದಯವು ತಾನು ಬದುಕುವದಿರಲಿ, ಸಾಯುವುದಿರಲಿ, ಸುಧಾಕರನ ಸಲುವಾಗಿಯೇ ಎಂಬ ಭಾವನೆಯಿಂದ ತುಂಬಿಬಿಟ್ಟಿತು. "ಅವನ ಉಗುರಿನ ಮೇಲಿಂದ ತಾನು ತನ್ನ ಶರೀರವನ್ನು ನಿವಾಳಿಸಿ ಒಗೆಯಬೇಕು; ಅವನ ಕಣ್ಣೊಳಗಿನ ಅಶ್ರುಬಿಂದುವಿನ ಬೆಲೆ ತನ್ನ ರಕ್ತಕ್ಕಿಂತ ಅಧಿಕವೆಂದೆಣಿಸಬೇಕು, ಅವನ ಮೂರ್ತಿಯ ಮೇಲೆ ಪ್ರೇಮದ ಸಂತತ ಧಾರೆಯನ್ನು ಹಿಡಿಯುವ ಸಾಮರ್ಥ್ಯವನ್ನು ಕೊಡಲು ದೇವರ ಬಳಿ ಬೇಡಬೇಕು." ಎಂಬ ವಿಚಾರದಿಂದ ಅವಳ ಮನಸ್ಸು ವ್ಯಾಪಿಸಿಬಿಟ್ಟಿತು.

"ಸುಧಾ, ನೀನು ನನ್ನವಳಾದರೆ ಅದು ಪಾಪವೆಂದು ನಿನಗೆ ಅನಿಸುವದೆ?"

"ಗಿಳಿಯೇನು, ಕಲಿಸಿದಂತೆ ಹೇಳುತ್ತದೆ. ಆದರೆ ವಿಧವೆಯ ಪ್ರೇಮಕ್ಕೆ ಜಗತ್ತು ಇಂದಿನ ತನಕ ಪಾಪವೆಂದೇ ಹೇಳುತ್ತ ಬಂದಿದೆ."

"ಪ್ರೇಮವು ಎಂದಿಗೂ ಪಾಪವಾಗಲಾರದು. ಪ್ರೇಮವಿಲ್ಲದಿದ್ದಲ್ಲಿ ಪುಣ್ಯವಿಲ್ಲ. ದ್ವೇಷದಂತಹ ಪಾಪ ಇನ್ನಾವುದಿಲ್ಲ. ಪ್ರೇಮ ಸ್ವಾರ್ಥ ತ್ಯಾಗವನ್ನು ಕಲಿಸುತ್ತದೆ. ಮತ್ತು ಸ್ವಾರ್ಥತ್ಯಾಗವೇ ನಿಜವಾದ ಧರ್ಮ ದ ನೆಲಗಟ್ಟು. ಇನ್ನೊಬ್ಬರ ದುಃಖದ ಅರಿವಾಗುವುದು ಪ್ರೇಮಕ್ಕೆ. ಪ್ರೇಮದ ಮೂಲಕವೇ ಇನ್ನೊಬ್ಬರ ಕಷ್ಟವನ್ನು ದೂರಮಾಡಲು ಹೆಣ ಗುತ್ತೇವೆ. ಅಂದಮೇಲೆ ಅದಕ್ಕೆ ಪಾಪವೆನ್ನುವದಾದರೆ ಅಮೃತಕ್ಕೆ ವಿಷವೆಂದಂತೆಯೇ. ಜಗತ್ತಿನಲ್ಲಿ ಎಲ್ಲೆಡೆಯಲ್ಲಿಯೂ ಕಂಡು ಬರುವ ಪರಮೇಶ್ವರನೆಂದರೆ ಪ್ರೇಮವೇ."

"ಈಗ ನನ್ನ ಎಲ್ಲ ಜಗತ್ತು ನಿಮ್ಮ ಎರಡು ಕಣ್ಣುಗಳಲ್ಲಿದೆ. ಅವು ತೋರಿಸಿದ್ದೇ ನನ್ನ ಮಾರ್ಗ."

"ಆದರೆ ನನ್ನ ಸಹಾಯದಿಂದ ನೀನು ಹಿಡಿಯುವ ಮಾರ್ಗದ ಮೇಲೆ ಜಗತ್ತು ಕಲ್ಲುಮುಳ್ಳುಗಳನ್ನು ಹರಡಿಬಿಡಬಹುದು. ಅದರಿಂದ ಇಬ್ಬರೂ ಸಮುದ್ರದಲ್ಲಿ... .."

"ಸಮುದ್ರದಲ್ಲಿಯ ಮೊಸಳೆಗಿಂತ ಮಾರ್ಗದ ಕಲ್ಲು ವಾಸಿ. ಇನ್ನೆಂದೂ ಇಂತಹ ವಿಚಾರ ತರಬೇಡಿ. ನನ್ನ ಕೊರಳಾಣೆ ಇದೆ."

"ಕೊರಳಾಣೆ ಕೊಡುವುದಕ್ಕೆ ಚಿಕ್ಕವಳಾದೆಯಾ?"

"ಉಸುಕಿನ ಮನೆ ಕಟ್ಟುವವರು ಚಿಕ್ಕವರೇ ಸರಿ!"

ಉಲ್ಲಸಿತರಾಗಿ ಇಬ್ಬರೂ ದಿನ್ನೆ ಏರತೊಡಗಿದರು. ನಡೆಯುತ್ತಿರುವಾಗ ಮಧುಕರ ದಾದಾಸಾಹೇಬರಲ್ಲಿ ನಡೆದ ಸಂಭಾಷಣೆಯನ್ನೆಲ್ಲ ತಿಳಿಸಿದಳು. ಸುಧಾಕರನ ಮನೆಗೆ ಸುಧೆಯು ಸುಳಿಯದಂತೆ ಮಾಡಬೇಕೆಂದು ಮಧುಕರನು ತಿಳಿಸಿದನೆಂದೂ, ಎಂ ಎ. ಸಿಗದ್ದರಿಂದ ಸುಧಾಕರನ ವೈರ ಕಟ್ಟುವುದು ಬೇಡವೆಂದು ದಾದಾಸಾಹೇಬರು ಹೇಳಿದರೆಂದೂ ನುಡಿದಳು. ಸುಧೆಯು ಸುಧಾಕರನ ಜೊತೆಗೆ ಯಮುವಿನ ಮನೆಗೆ ಹೋದದ್ದು ಆತನಿಗೆ ಹೇಗೋ ತಿಳಿದಿತ್ತಂತೆ.

ಮಂದಿರದ ಬಾಗಿಲಲ್ಲಿಯೇ ಸ್ವಾಮಿಯವರ ದರ್ಶನವಾಯಿತು. ಸುಧಾಕರನ ಜೊತೆಯಲ್ಲಿ ಸುಧೆಯನ್ನು ಕಂಡು ಸ್ವಾಮಿಯವರು ಚಕಿತರಾದರು. ಸುಧಾಕರನು ತಾಯಿಯ ಕಾಯಿಲೆಯ ವಿಷಯ ಹೇಳಲು ಸ್ವಾಮಿಯವರು ಒಳಗೆ ಹೋಗಿ ಎಂತಹದೋ ಗುಳಿಗೆ ತಂದುಕೊಟ್ಟರು. ಆದರೂ ಮನಬಿಚ್ಚಿ ಮಾತಾಡದೆ 'ಸಾಯಂಕಾಲ ನೀನೊಬ್ಬನೇ ಬಾ' ಎಂದು ಒಳಗೆ ಹೋದರು. ತಾನು ಸ್ತ್ರೀಪಾಶದಲ್ಲಿ ಬಿದ್ದುದೇ ಇವರ ಮನಸ್ಸಿಗೆ ಬಂದಿರಲಿಕ್ಕಿಲ್ಲವೆಂದು ಸುಧಾಕರನು ಊಹಿಸಿದನು.

ದಿನ್ನೆ ಇಳಿಯುತ್ತಿರುವಾಗ ಸುಧೆಯು "ಜಾನಕಮ್ಮನವರಿಗೆ ಈ ವಿಷಯ ಸೇರಬಹುದೇ?" ಎಂದಳು.

"ಸ್ವಾಮಿಯವರು ಅವಳಿಗೆ ತಿಳಿಸಿ ಹೇಳುವರು."

"ಸ್ವಾಮಿಯವರೇ?"

"ಅಹುದು; ಅವರು ಬರೇ ಕಾವಿಬಣ್ಣದ ಸನ್ಯಾಸಿಯಲ್ಲ. ಅವರ ಮತ ತುಂಬ ಉದಾರವಿದೆ."

"ಆದರೆ ಸ್ವತಃ ತನ್ನ ಮೇಲೆ ಪ್ರಸಂಗ ಬಂದಾಗ ಎಲ್ಲರೂ ತಮ್ಮ ಮಾತನ್ನು ಬದಿಗೊತ್ತುತ್ತಾರೆ."

"ಸ್ವಾಮಿಯವರಿಗೆ ಇದರಲ್ಲಾವ ಸಂಬಂಧವಿದೆ?"

"ಅವರು ನನ್ನ ಮಾವನವರು."

ಶಬ್ದ ಉಚ್ಚರಿಸಿದಂತೆಯೇ ಕಣ್ಣು ಕತ್ತಲೆಗವಿದು ಧೊಪ್ಪನೆ ಬಿದ್ದು ಬಿಟ್ಟಳು.

× × × × ×

ಸುಧೆಯ ಕೊನೆಯ ಉದ್ಗಾರದಿಂದ ಸುಧಾಕರನಿಗೆ ಆಶ್ಚರ್ಯವಾಯಿತಾದರೂ, ಸದಾನಂದ ಸ್ವಾಮಿಯವರ ಹಿನ್ನೆಲೆಯ ಮೇಲೆ ಪೂರ್ಣಪ್ರಕಾಶ ಬಿದ್ದಿತು. ಹೆಸರು, ಊರು ಇವೆರಡನ್ನು ಬಿಟ್ಟು ಉಳಿದೆಲ್ಲ ಸಂಗತಿಯನ್ನು ಸ್ವಾಮಿಯವರು ಮೊದಲೇ ತಿಳಿಸಿದ್ದರು. ಸಾವಂತವಾಡಿಯಲ್ಲಿ ಹತ್ತು ವರ್ಷಗಳ ಹಿಂದೆ ಪ್ರಸಿದ್ಧವೈದ್ಯನಾದ ಸದುಭಾವು ದೇಸಾಯಿ-ಹಾಗೂ ಸದಾನಂದ ಸ್ವಾಮಿಯವರನ್ನು ಮನಸ್ಸಿನಲ್ಲಿಯೇ ತೂಗಿ ನೋಡಿದನು- ಸಾವಂತವಾಡಿಯಲ್ಲಿ ಸ್ವಾಮಿಯವರು ಅಪರಾತ್ರಿಯಲ್ಲಿ ಮಧುಕರನ ಮನೆಗೆ ಬಂದ ಸಮಸ್ಯೆಯೂ ತಿಳಿಯಾಯಿತು.

ಆದರೆ ಸ್ವಾಮಿಯವರು ಸನ್ಯಾಸವನ್ನೇಕೆ ಸ್ವೀಕರಿಸಿದರೆಂಬ ಪ್ರಶ್ನೆ ಮಾತ್ರ ಬಿಡಿಸಲಾಗಲಿಲ್ಲ. "ತನ್ನ ಲೋಭ ತನ್ನ ಘಾತಮಾಡಿತು." ಎಂದ ಮಾತಿನ ಅರ್ಥವೇನು? ಲೋಭವು ಧೃತರಾಷ್ಟ್ರನಂತೆ ಕುರುಡು. ಅಷ್ಟೇ ಅಲ್ಲ; ಧೃತರಾಷ್ಟ್ರನಿಗೆ ತನ್ನ ನೂರು ಮಕ್ಕಳ ಮರಣವಾರ್ತೆ ಕೇಳುವ ಪ್ರಸಂಗ ಬಂದಂತೆ ಲೋಭಕ್ಕೂ ತನ್ನ ಹೊಟ್ಟೆಯಲ್ಲಿ ಹುಟ್ಟುವ ಆಸೆಗಳು ಸುಟ್ಟು ಬೂದಿಯಾದುದನ್ನು ನೋಡಬೇಕಾಗುತ್ತಿದೆ. ಸ್ವಾಮಿಯವರು ಲೋಭಕ್ಕೆ ಬಲಿಬಿದ್ದು ಅದಾವ ಪಾಪ ಮಾಡಿರಬಹುದು?

ವೈದ್ಯಕಿ ಹಾಗೂ ಮನೆಯ ಉತ್ಪನ್ನ, ಸುಂದರಾಬಾಯಿಯಂತಹ ಸುಂದರ ಹೆಂಡತಿ, ಮಧುಕರನಂತಹ ಅಲ್ಪವಯಸ್ಸಿನ ಹಸುಳೆ– ಇವರೆಲ್ಲರನ್ನು ತ್ಯಜಿಸಿ ಕಾಶಿಯ ದಾರಿಯನ್ನೇಕೆ ಹಿಡಿದರು? ಈ ಸಮಾಚಾರವನ್ನಾದರೂ ಮನೆಗೆ ತಿಳಿಸಬೇಕಾಗಿತ್ತಲ್ಲವೇ? ಸಂಸಾರದ ಸರ್ವಪಾಶಗಳನ್ನು ಒಂದೇ ಹೊಡೆತಕ್ಕೆ ತುಂಡರಿಸಿ ಚಲ್ಲುವ ವೈರಾಗ್ಯ ಸದುಭಾವು ದೇಸಾಯರಿಗೆಲ್ಲಿಂದ ಬಂದಿತು? ಅವರ ಉದ್ಗಾರಗಳಿಂದ ಸನ್ಯಾಸಿಯಾದರೂ ಮನಶ್ಶಾಂತಿ ದೊರಕಿಲ್ಲವೆಂದು ಗೊತ್ತಾಗಿತ್ತು.

ಸುಧೆಯು ತನ್ನೊಡನೆ ಬರಲು ಮನಸ್ಸು ಮಾಡಿದಳೆಂಬುದರ ಕಾರಣವೂ ಸುಧಾಕರನಿಗೆ ಹೊಳೆದಂತಾಯಿತು.

"ಸುಧಾ, ನಿನಗೆ ಸ್ವಾಮಿಯವರ ವಿಷಯವಾಗಿ ಬಂದ ಸಂದೇಹ ನಿವಾರಣೆಗಾಗಿಯೇ ನನ್ನ ಜೊತೆಗೆ ಬಂದಿದ್ದೆಯಲ್ಲವೇ?"

"ಹೌದು. ನನ್ನ ಸಂಶಯ ನಿವೃತ್ತಿಯೇನೋ ಆಯಿತು. ಆಗಿನ ಸಮುದ್ರದ ಮೇಲಿನ ಮಾತುಗಳೆಲ್ಲ ಕನಸೆ ಆಗುವದಿದ್ದರೆ ದೇವರು ಅಂತಹ ಕನಸನ್ನೇಕೆ ಬೀಳಗೊಟ್ಟನು ?"

"ನಸುಕಿನಲ್ಲಿ ಬಿದ್ದ ಕನಸು ನಿಜವಾಗುತ್ತದೆಂದು ಬಲ್ಲವರು ಹೇಳುವರು."

ಸುಧೆಯು ನಕ್ಕಳು. ಆದರೆ ಅವಳ ಮುದ್ರೆಯ ಮೇಲಿನ ಚಿಂತೆಯ ಮೋಡ ವಿಶೇಷವಾಗಿ ಕರಗಿದ್ದಿಲ್ಲ. ಬೆಳಗಾಗುತ್ತ ಬಂದಿದ್ದರೂ ಜನರ ಓಡಾಟ ಆರಂಭವಾಗಿರಲಿಲ್ಲ. ಆದರೆ ನಡುನಡುವೆ ತನ್ನ ಮಗುವನ್ನು ಮುದ್ದಿಸುತ್ತ, ಅವನ ಕಡೆ ದೊಡ್ಡ ಕಣ್ಣು ಮಾಡಿ ನೋಡುತ್ತ, ನಗುತ್ತ ಉಷಃಕಾಲದ ಸರ್ವಸೌಂದರ್ಯ ತನ್ನ ಮಗುವಿನಲ್ಲಿ ಒಂದುಗೂಡಿದೆ ಯೆಂಬ ಅಭಿಮಾನದಿಂದ ಸೃಷ್ಟಿಯನ್ನು ತುಚ್ಛವೆಂದೆಣಿಸಿ ಒಂದು ಭಿಕ್ಷುಕಿಯು ಮಾತ್ರ ದಾರಿಯಲ್ಲಿ ನಡಿಯುತ್ತಿದ್ದಳು. ಸುಧೆಯು ಅವಳ ಕಡೆಗೆ ಕಣ್ಣು ತುಂಬ ನೋಡಿ ನಿಟ್ಟುಸಿರು ಬಿಟ್ಟಳು. ಅದು ಸುಧಾಕರನ ಲಕ್ಷಕ್ಕೆ ಬಾರದೆ ಹೋಗಲಿಲ್ಲ. ಆದರೆ ರವಿರಾಜನ ಸ್ವಾಗತಕ್ಕೋಸ್ಕರ

ಆಕಾಶದದರಬಾರಿನಲ್ಲಿ ಹಾಸಲ್ಪಡುವ ತರತರದ ರತ್ನಗಂಬಳಿಗಳನ್ನು ನೋಡುವುದರಲ್ಲಿಯೇ ತನ್ಮಯನಾದಂತೆ ನಟಿಸಿದನು.

ಆದಿನ ಸಂಧ್ಯಾಹ್ನ ಸಾಲೆಯಲ್ಲಿ ಮಧುಕರನು ಸುಧಾಕರನೊಡನೆ ಕಾಲುಕೆದರಿದನು. ಏಳನೇ ಇಯತ್ತೆಯ ಮರಾಠೀ ವಿಷಯವನ್ನು ಸುಧಾಕರನಿಂದ ತಪ್ಪಿಸಿ ತನ್ನ ಕಡೆ ಕೊಡಬೇಕೆಂದು ದಾದಾಸಾಹೇಬರಿಗೆ ಸೂಚಿಸಿದನು. ಅವರು ತಮ್ಮ ಅದ್ವಿತೀಯ ಚಾತುರ್ಯಕ್ಕನುಗುಣವಾಗಿ ಅದನ್ನು ಸುಧಾಕರನ ಮುಂದಿಟ್ಟರು.

"ಮಧುಕರ ಮರಾಠಿಯಲ್ಲಿ ನಾಮಾಂಕಿತ ಕವಿ. ಅಂದಮೇಲೆ ಅವರ ಮರಾಠಿ ಜ್ಞಾನದ ಬಗ್ಗೆ ಪ್ರಶ್ನೆಯೇ ಇಲ್ಲ."

"ಕವಿಯೇ ಉತ್ತಮ ಶಿಕ್ಷಕನೆಂಬ ನಿಯಮವಿದೆಯೆ?"

"ಕವಿಯು ವಿಶ್ವದ ಶಿಕ್ಷಕನಿದ್ದಾನೆ." ಎಂದು ಮಧುಕರನು ಒಂದು ಸುಭಾಷಿತವನ್ನು ಹೇಳಿದನು.

"ಸಾಲೆಯಲ್ಲಿ ಕಲಿಸುವುದು ವಿದ್ಯಾರ್ಥಿಗಳಿಗೆ, ವಿಶ್ವಕ್ಕಲ್ಲ."

"ಎಷ್ಟಪ್ಪಾ ಇವರಿಗೆ ವಿದ್ಯಾರ್ಥಿಗಳ ಕಾಳಜಿ? ಲಕ್ಷ್ಯವೆಲ್ಲ ವಿದ್ಯಾರ್ಥಿನಿಯರ ಕಡೆಗೇ!"

"ಎತ್ತರದಲ್ಲಿರುವ ದ್ರಾಕ್ಷೆ ಹುಳಿಯೆಂದ ಮಾತ್ರಕ್ಕೆ ಅವು ನರಿಯ ಪಾಲಾಗುವದಿಲ್ಲ. ನೆಲದ ಪವತೆಕಾಯಿ ತಿಂದೇ ಸಮಾಧಾನ ಹೊಂದ ಬೇಕಾಗುತ್ತದೆ."

ಮಧುಕರನ ಮಾತ್ಸರ್ಯದ ಮೂಲವನ್ನು ಕಂಡುಹಿಡಿಯುವದು ಸುಧಾಕರನಿಗೇನೂ ಕಠಿಣವಿದ್ದಿಲ್ಲ. ನೀರುಹಾಕಿದವಳೇ ಹೂ ಮುಡಿಯು ವಂತೆ ಸುಧಾಕರನು ತನ್ನ ದಯಾಳುಸ್ವಭಾವದಿಂದ, ಬಹುತೇಕವಾಗಿ ಎಲ್ಲ ವಿದ್ಯಾರ್ಥಿಗಳಲ್ಲಿ ಪ್ರಿಯನಾಗಿದ್ದನು. ಆದರೆ? ಮಧುಕರನು ತನ್ನ ದೊಡ್ಡಸ್ತಿಕೆ, ಹಾಗೂ ಕವಿಯೆಂಬ ಅಭಿಮಾನದಿಂದ ಬೀಗಿದವ

ನಾದುದರಿಂದ ಸುಧಾಕರನ ಮುಂದೆ ಆತನ ಆಟವೇನೂ ನಡೆಯುತ್ತಿದ್ದಿಲ್ಲ. ವಾರುಣಿಯ ವಿಷಯದಲ್ಲಿ ದೈವವು ತನಗೇ ಜಯಮಾಲೆ ಹಾಕುವದೆಂದು ಮಧುಕರನು ನಂಬಿದ್ದ. ಆದರೆ ಬಿ. ಎ. ಗಿಂತ ಎಂ ಎ ಶ್ರೇಷ್ಠವೆಂಬ ಕಲ್ಪನೆ ರಾವಸಾಹೇಬರಿಗಿದ್ದುದರಿಂದಲೂ- ಇವರಲ್ಲಿ ಯಾರಿಗೂ ಹೆಣ್ಣು ಕೊಡುವ ಸಂಕಲ್ಪವಿಲ್ಲದ್ದರಿಂದಲೂ, ರಾವಸಾಹೇಬರು ಸುಧಾಕರನಿಗೇ ಮಗಳನ್ನು ಕಲಿಸಲು ಒಪ್ಪಿಸಿದರು. ಈ ಕಲಿಸುವಿಕೆಯಿಂದ ವಾರುಣಿಯ ಮನಸ್ಸು ಸುಸಂಸ್ಕೃತವಾಗಿ ಮಧುಕರನ ಆಡಂಬರ, ಜಲ್ಪನೆ, ಅಹಂಕಾರಗಳ ಬಗ್ಗೆ ಅವಳಿಗೆ ಮೆಲ್ಲಮೆಲ್ಲನೆ ತಿರಸ್ಕಾರವುಂಟಾಗಹತ್ತಿತು. ಸುಧಾಕರನು ವಾರುಣಿಯ ಮುಂದೆ ಮಧುಕರನ ವಿರುದ್ಧ ಚಕಾರಶಬ್ದವನ್ನು ಎತ್ತುತ್ತಿರಲಿಲ್ಲ. ಆದರೆ ವಾರುಣಿಯ ಉದಾಸೀನ ವರ್ತನೆಯ ಮೂಲಕ ಇವಕ್ಕೆಲ್ಲ ಸುಧಾಕರನ ಹೇಳಿಕೆಯೇ ಕಾರಣವೆಂದು ಮಧುಕರನ ಭಾವನೆಯಾಗಿತ್ತು. ಸುಧಾಕರನು ವಾರುಣಿಯನ್ನು ತನ್ನ ಬಲೆಯಲ್ಲಿ ಕೆಡಹುತ್ತಾನೆಂಬ ವಿಚಾರ ಬಂದುದರಿಂದ, ಮಧುಕರನಲ್ಲಿದ್ದ ಮಾತ್ಸರ್ಯದ ಕಿಡಿಯು ಪ್ರಜ್ವಲಿಸಿತು. ಸುಧಾಕರ ಮತ್ತು ವಾರುಣಿಯರ ವಿಷಯದಲ್ಲಿಯ ಪ್ರತಿಯೊಂದು ಸುದ್ದಿ ತಿಳಿದುಕೊಳ್ಳುವುದಕ್ಕೋಸ್ಕರ ಅವನು ಗಂಗಾಧರನನ್ನು ತನ್ನೆಡೆಗೆ ಒಡೆದುಕೊಂಡನು. ರಾವಸಾಹೇಬರ ಮನೆಯ 'ಟಾಯುಮ್ಸ್' ತರಿಸುವ ನೆಪಮಾಡಿ ಗಂಗಾಧರನಿಗೆ ಸುಧಾಕರ ಮತ್ತು ವಾರುಣಿಯರ ವಿಷಯದಲ್ಲಿ ಗುಪ್ತಪ್ರಶ್ನೆ ಹಾಕಹತ್ತಿದನು. ಹೆಂಡಗುಡುಕ ಗಂಗಾಧರನ ಮನಸ್ಸಿನಲ್ಲಿ ಸುಧಾಕರನ ಬಗ್ಗೆ ವೈರಭಾವವಿದ್ದುದರಿಂದ ಮಧುಕರನ ಕೆಲಸ ಸುಲಭವಾಗಿ ಸಾಧಿಸಿತು. ಏನಾದರೊಂದು ನೆವದಿಂದ ಸುಧಾಕರನಿಗೆ ರಾವಸಾಹೇಬರ ಮನೆ ಬಂದುಮಾಡಬೇಕೆಂದು ಅವನು ನಿಶ್ಚಯಿಸಿದ್ದನು. ಆದರೆ ಒಂದು ಮುಳ್ಳು ತೆಗೆಯುವದಕ್ಕಾದರೂ ಇನ್ನೊಂದು ಮುಳ್ಳು ಬೇಕೇಬೇಕು. ಅದು ಸಿಗದೇ ಇದ್ದುದರಿಂದ ಏನಾದರೊಂದು ಪ್ರಯತ್ನದಿಂದ ವಾರುಣಿಯ ಮನಸ್ಸನ್ನು ತನ್ನೆಡೆಗೆ ಸೆಳೆದುಕೊಳ್ಳಬೇಕೆಂದು ಯತ್ನಿಸುತ್ತಿದ್ದ. ಏಳನೇಯತ್ತೆಯ ಮರಾಠಿವಿಷಯ ತಾನು ತೆಗೆದುಕೊಳ್ಳಬೇಕೆಂಬುದರ ಉದ್ದೇಶ ಇದೇ ಇತ್ತು. ಅಪ್ಪರೆಯೊಡನೆ ಮಧು

ವೆಯಾಗಿ ಕುಬೇರನ ಸಂಪತ್ತನ್ನು ಸಂಪಾದಿಸುವುದು ಸ್ವರ್ಗದಲ್ಲಿಯೂ ಸಾಧ್ಯವಿದ್ದಿಲ್ಲ ಆದರೆ ವಾರುಣಿಯೊಡನೆ ಲಗ್ನವಾದರೆ ಸ್ವರ್ಗದಲ್ಲಿ ದುರ್ಲಭವಾದ ಈ ಸಂಗತಿಯನ್ನು ಇಹಲೋಕದಲ್ಲಿಯೇ ಸಂಪಾದಿಸಿ ಬಿಡಬಹುದೆಂದು ಮಧುಕರನಿಗೆ ದೃಢವಾದ ನಂಬಿಕೆಯಿತ್ತು.

ಮಧುಕರನ ಮನಸ್ಸಿನಲ್ಲಿದ್ದ ಈ ವಿಷದ ಸುಳಿವು ಸುಧಾಕರನಿಗೆ ಮೊಟ್ಟಮೊದಲು ಇದ್ದಿಲ್ಲ. ಈಗೀಗ ತನ್ನ ವಿಷಯದಲ್ಲಿ ಆತನ ಮನಸ್ಸು ಕಹಿಯಾಗಿದೆಯೆಂದು ಅನಿಸುತ್ತಿತ್ತು. ಇದಕ್ಕೆಲ್ಲ ಸುಧೆಯು ನಮ್ಮ ಮನೆಗೆಲಸ ಮಾಡುವದೇ ಕಾರಣವಿರಬೇಕೆಂದು ಊಹಿಸಿದ್ದ. ಮರಾಠಿ ವಿಷಯವನ್ನು ಬದಲಿಸುವ ಬಗ್ಗೆ ತಿಕ್ಕಾಟವಾದ ಮೇಲೂ ಸುಧಾಕರನು ಈ ವಿಷಯದಕಡೆ ವಿಶೇಷ ಲಕ್ಷ್ಯಕೊಡಲಿಲ್ಲ. ಅವನು ಜಗನ್ನಾಥನಿಗೆ ಎಲ್ಲಿಯಾದರೊಂದು ಕೆಲಸ ಕೊಡಿಸಿ ಯಮುಳ ಕುಟುಂಬಕ್ಕೆ ಏನಾದರೂ ನೆರವಾಗುವ ಯತ್ನ ಮಾಡುತ್ತಿದ್ದನು. ಊರಲ್ಲಿಯ ವಾಚನಾಲಯದಲ್ಲಿ ಸ್ವಲ್ಪಮಟ್ಟಿಗೆ ಕಲಿತ ಮನುಷ್ಯನ ಅಗತ್ಯವಿತ್ತು. ಆದರೆ ಪುಸ್ತಕ ಕೊಡುವದರ ಜೊತೆಗೆ ವಾಚನಾಲಯದಲ್ಲಿ ಕಸಉಡುಗುವದು, ಮತ್ತು ಮನೆ ಮನೆ ತಿರುಗಿ ವರ್ಗಣಿ ಕೂಡಿಸುವ ಕೆಲಸವನ್ನೂ ಮಾಡಬೇಕೆಂದು ಗೊತ್ತಾದುದರಿಂದ ಜಗನ್ನಾಥನು ಆ ನೌಕರಿಯನ್ನು ಬಿಟ್ಟುಬಿಟ್ಟನು. ಇನ್ನೂ ಇಂತಹ ಒಂದೆರಡು ಕೆಲಸವಿದ್ದರೂ ಅವೆಲ್ಲ ತನ್ನ ಘನತೆಗೆ ಕುಂದು ಎಂದು ಭಾವಿಸಿ ಖಾಲಿ ಇದ್ದನು.

ಮನೆಯಲ್ಲಿ ಅನ್ನಾನ್ನಗತಿಯಾಗಿರುವಾಗ ಏಳನೇ ಇಯತ್ತೆಯಲ್ಲಿ ನಾಪಾಸಾದ ಜಗನ್ನಾಥ ಇಂತಹ ನೌಕರಿ ಬಿಟ್ಟು ಕೊಡುವದೆಂದರೆ ಅನ್ನಛತ್ರಕ್ಕೆ ಹೋಗುವವನು ಸ್ವಲ್ಪ ಅಡ್ಡವಾಸನೆಯಿದ್ದ ತುಪ್ಪದ ನೆಪ ಮಾಡಿ ಎಲೆಯ ಮೇಲಿಂದ ಎದ್ದುಹೋದಂತೆಯೆ ಸರಿಯೆಂದು ಸುಧಾಕರನಿಗೆ ಅನಿಸಿತು. ಅದಕ್ಕಾಗಿಯೆ ಸಾಲೆಯಲ್ಲಿ ಮೇಲಿನ ವರ್ಗದವರಿಗೆ 'ನೀವು ಮುಂದೇನು ಮಾಡುವವರು?' ಎಂದು ಕೇಳಿದನು. ಆಗ ಅನೇಕ ಹುಡುಗರು ನೌಕರಿ ಎಂದು ಉತ್ತರವಿತ್ತರು. ಉಳಿದವರು ವಕೀಲ, ಡಾಕ್ಟರ ಮತ್ತು ಇಂಜನಿಯರರಾಗುವವರಿದ್ದರು. ಇಂಗ್ಲಿಷ ವಿದ್ಯೆ,

ಆರನೇ ಇಯತ್ತೆಯಲ್ಲಿ ಎರಡೆರಡು ವರ್ಷ ಕಳೆಯುವ ಹುಡುಗರ ಇಂತಹ ಮಹತ್ವಾಕಾಂಕ್ಷೆಯು ಹೆಳವನು ಧವಲಗಿರಿಯನ್ನು ಮುಟ್ಟುವ ಬಯಕೆಯಂತೆ ಹಾಸ್ಯಾಸ್ಪದವೆಂದು ಅನಿಸದಿರಲಿಲ್ಲ. ಮನುಷ್ಯನು ಮನೋರಾಜ್ಯಗಳನ್ನು ಕಟ್ಟಬಾರದೆಂದಲ್ಲ, ಆದರೆ ಕರ್ತೃತ್ವದ ಹೊರತು ಆ ಮನೋರಾಜ್ಯಗಳು ಸತ್ಯ ಸೃಷ್ಟಿಯಲ್ಲಿಳಿಯುವದಿಲ್ಲೆಂಬುದನ್ನು ಯಾರೂ ಮರೆಯಕೂಡದು. ಪ್ರತಿಯೊಬ್ಬ ಹುಡುಗಿಯು ರಾಣಿಯಾಗುವೆನೆಂದು ಆಸೆ ಪಡುತ್ತ ಕುಳಿತುಕೊಂಡರೆ ಮದುವೆಯಾದ ಮೇಲೆ ಅವಳ ಮನೆಯ ಒಲೆಯು ನಿರಾಶೆಯ ಕಣ್ಣೀರಿನಿಂದಲೆ ನಂದಿ ಹೋಗಬಹುದು. ಆಸೆಗಿಂತ ಹುಚ್ಚುಧ್ಯೇಯವು ವಾಸಿಯಾಗಿರುತ್ತದೆ. ಆಶೆಯು ಕೈಮೇಲಿನ ರೇಷೆಯನ್ನು ನೋಡುತ್ತಿದ್ದರೆ ಧ್ಯೇಯವು ತನ್ನ ಕಾಲಿನ ಸಾಮರ್ಥ್ಯವನ್ನು ಅಳೆಯುತ್ತದೆ.

ಯಾರನ್ನು ಕೇಳಿದರೂ ಕಲಿತು ಕುರ್ಚಿಯಿಂದ ಹಣವನ್ನು ರಾಶಿ ಹಾಕುವೆನೆಂಬ ಮನೋವೃತ್ತಿಯೇ ಕಂಡುಬಂದುದರಿಂದ ಸುಧಾಕರನಿಗೆ ಆಶ್ಚರ್ಯವಾಯಿತು. ಶಿಕ್ಷಣವು ಸಾರ್ವತ್ರಿಕವಾಗಿ ಸಮಾಜದಲ್ಲಿ ಅತಿ ಕೆಳಗಿನ ತರಗತಿಯ ವರೆಗೆ ಮುಟ್ಟಬೇಕೆಂಬುದು ಅವನ ಧ್ಯೇಯವಿತ್ತು. ಆದರೆ ಕಲಿತವರೆಲ್ಲರೂ ಡಾಕ್ಟರ, ವಕೀಲ ಮತ್ತು ಮಾಸ್ತರರಾಗಿಬಿಟ್ಟರೆ ಇವರೆಲ್ಲರಿಗೆ ರೋಗಿ, ಪಕ್ಷಗಾರ ಮತ್ತು ವಿದ್ಯಾರ್ಥಿಗಳು ಎಲ್ಲಿಂದ ಸಿಗಬೇಕು? ಒಂದುವೇಳೆ ಅವರು ಸಿಗಲಿ, ಸಿಗದೆ ಇರಲಿ, ಆದರೆ ಜೀವನಕ್ಕೆ ಅಗತ್ಯವಿರುವ ಅನ್ನವಸ್ತ್ರಾದಿ ಪದಾರ್ಥಗಳನ್ನು ಯಾರು ಹುಟ್ಟಿಸುವರು? ಶಿಕ್ಷಣಪಡೆಯುವುದು ಮನಸ್ಸಿನ ವಿಕಾಸಕ್ಕೆ. ಆದರೆ ಅದರಿಂದ ಕಾಯಕಷ್ಟಕ್ಕೆ ನಾಚಿಕೆಯಾಗಹತ್ತಿದರೆ ಅಂತಹ ಶಿಕ್ಷಣದ ಪ್ರಯೋಜನವೇನು? ತನ್ನ ತಾಯಿಗೆ ಭಾರಭೂತನಾದ ಜಗನ್ನಾಥನಲ್ಲಿ ಹಣಸಂಪಾದಿಸುವ ಸಾಮರ್ಥ್ಯ ಬರಲಿಲ್ಲ. ಒಂದುವೇಳೆ ಕಲಿಯದಿದ್ದರೆ ಆತ ಇವೆಲ್ಲ ಕೆಲಸಗಳನ್ನು ಮೈಮುರಿದು ಮಾಡುತ್ತಿದ್ದ. ಕೆಲಸದ ಮೇಲ್ಮೆ ಕೀಳ್ಮೆಗಳು ಆ ಕೆಲಸದಿಂದ ಸಮಾಜಕ್ಕಾಗುವ ಹಿತವನ್ನು ಅವಲಂಬಿಸಿವೆ. ಆದರೆ ಸದ್ಯದ ಶಿಕ್ಷಣದಿಂದ ಕೆಲಸ ಮಾಡುವ ಪ್ರವೃತ್ತಿಯೇ ಅಳಿದು ಹೋಗುತ್ತಿದೆ. ಈ ದೃಷ್ಟಿಯಿಂದ ಇಂದಿನ ಪೀಳಿಗೆ ಹಾಗೂ ಹಿಂದಿನ ಪೀಳಿಗೆಯ

ತುಲನೆಮಾಡಿ ನೋಡಿದನು. ಶ್ರೀ ಕೃಷ್ಣನ ವಿರಾಡ್ರೂಪವನ್ನು ಕಂಡು ಅರ್ಜುನನು ಭಯ ಪಟ್ಟಿರಲಿಕ್ಕಿಲ್ಲ. ಆದರೆ ಈ ತುಲನೆಯಿಂದ ಹೊರ ಬೀಳುವ ದುಃಖದ ದೃಶ್ಯಗಳನ್ನು ಕಂಡು ಸುಧಾಕರನು ನಿಜವಾಗಿಯೂ ಭಯಪಟ್ಟನು. ಜಯಗಾಂವದ ಶಾಲೆಯಲ್ಲಿ ನಾಲ್ಕು-ಐದು ಇಯತ್ತೆವಾನಾಗಿ ಹಣ ಅಥವಾ ಬುದ್ಧಿಯ ಅಭಾವದ ಮೂಲಕ ಎಷ್ಟೋ ವಿದ್ಯಾರ್ಥಿಗಳು ತಮ್ಮ ತಮ್ಮ ಊರಲ್ಲಿಯೇ ಉಳಿದುಬಿಟ್ಟಿದ್ದರು. ತಂದೆಯು ನಸುಕಿನಲ್ಲಿ ಲಂಗೋಟಿ ಹಾಕಿ ಹೊಲದಲ್ಲಿ ಕೆಲಸಕ್ಕೆ ಹೋಗುತ್ತಿದ್ದರೂ ಏಳುಗಂಟೆಗೆದ್ದು ಚಹಾ ಕುಡಿದು ಪೇಟೆಗೆ ಹೋಗುವುದು-ಮನೆಯ ಯಜಮಾನನು ಹೊಟ್ಟೆಗೋಸ್ಕರ ಹೊರೆಯನ್ನು ಹೊರುವ ಸೋರೆ ಕೈಕೊಂಡಿದ್ದರೂ ತನ್ನ ಕೋಟಿನ ಇಸ್ತ್ರೀ ಕೆಟ್ಟೀತೆಂದು ಚಿಕ್ಕ ಗಂಟನ್ನು ಎತ್ತದಿರುವುದು——ಇವರ ದಿನಚರ್ಯೆಯಾಗಿತ್ತು. ಇಂಗ್ಲೀಷು ಶಾಲೆಯ ಸಂಸ್ಕಾರದ ಮೂಲಕ ನೇಗಿಲು ಹಿಡಿಯುವದೆಂದರೆ ಜೀವದ ಮೇಲೆ ಬರುತ್ತಿತ್ತು. ತೆಂಗಿನ ಮರ ಹತ್ತುವ ಅಭ್ಯಾಸವಂತೂ ಇಲ್ಲವೇ ಇಲ್ಲ. ಎಳೆಬಿಸಿಲಿಗೂ ಬಿಸಿಲು ಕೊಡೆ ಹಿಡಿಯುವ ಈ ತರುಣರು ಉಪ್ಪಿನ ಆಗರದಲ್ಲಿ ಒಂದೆರಡು ದಿನ ಕಾಲಿಟ್ಟರೆ ಕಾಯಿಲೆಯಿಂದ ಹಾಸಿಗೆ ಹಿಡಿಯುತ್ತಿದ್ದರು. ಕಸಬರಿಗೆ, ಕತ್ತ, ಹಗ್ಗ ತಯಾರಿಸುವುದೆಂದರೆ ಕೀಳು ಕೆಲಸ. ಊರಲ್ಲಿ ದೊಡ್ಡ ದಂಧೆಗಳಿಲ್ಲ. ಹಳ್ಳಿಯೂರಲ್ಲಿ ಸರಕಾರಿ ನೌಕರಿಯೆಲ್ಲಿಂದ ಬರಬೇಕು? ಖಾಸಗಿ ನೌಕರಿಯಾದರೂ ಹೆಚ್ಚೆಂದರೆ ಬೆರಳಿನಿಂದ ಎಣಿಸುವಷ್ಟು.

ಇಂತಹ ಶಾಲೆಯಲ್ಲಿ ಪ್ರತಿವರ್ಷ ಸಾವಿರಾರು ಮಂದಿ ಪಾಸಾಗುವವರೂ ಇದ್ದಾರೆ. ಇಂತಹರು ಕೂಲಿ-ಕುಂಬಳಿ, ಗದ್ದೆ-ಬೇಸಾಯ ಮಾಡಲಾರರು. ಶಹರಿನಲ್ಲಿ ಇವರಿಗಿಂತ ಹೆಚ್ಚಿಗೆ ಕಲಿತವರಿರುವುದರಿಂದ ಅಲ್ಲಿ ಅವರ ಬೇಳೆ ಬೇಯುವದಿಲ್ಲ. ಇದರ ಅರ್ಥವಿಷ್ಟೇ "ರೀತಿ ನೋಡಿದರೆ ಅರಸನದು. ಗಳಿಕೆಯಿಲ್ಲಾ ಕಾಸಿನದು." ಎಂಬಂತೆ ಇವರ ಸ್ಥಿತಿಯಾಗುತ್ತಿದೆ. ನಿರುದ್ಯೋಗಿಗಳಾಗಿದ್ದಾರೆಂದು ಮದುವೆಯಾಗುವದೇನೂ ತಡೆಯುವದಿಲ್ಲ ಶಿಕ್ಷಣದಿಂದ ಹಿರಿಯರ ಮೇಲಿನ ಹೊಣೆಗಾರಿಕೆ

ಕಡಿಮೆ ಮಾಡುವುದರ ಬದಲು ತಮ್ಮ ಹೆಂಡತಿ ಮಕ್ಕಳ ಭಾರವನ್ನೂ ಅವರ ಮೇಲೆ ಹೇರಿಬಿಡುತ್ತಾರೆ.

ಆದರೆ ತಂದೆ ತಾಯಿ ಆ ಜನ್ಮ ದೊರೆಯಲಾರರು. ಹಳ್ಳಿಯಲ್ಲಿದ್ದು ಶರೀರ ಶ್ರಮಮಾಡುವ ಹಾಗಿಲ್ಲ; ಸಾದಾ ಉದ್ಯೋಗ ದಂಧೆಗೆ ಕೈ ಹಚ್ಚುವ ಹಾಗಿಲ್ಲ; ಇಂತಹ ಜಂಬದ ಜನರಿಗೆ ಹೊಸ ಹೊಸ ಉದ್ಯೋಗ ಹುಟ್ಟಿಸಬೇಕಾಗುತ್ತದೆ. ಜುಗಾರ ಮತ್ತು ಸುಳ್ಳು ಸಾಕ್ಷಿಗಳ ಪ್ರಚಾರ ಹಳ್ಳಿ ಹಳ್ಳಿಗಳಲ್ಲಿ ಹಬ್ಬತೊಡಗಿದೆ. ಪರಂಪರಾಗತ ಜಮೀನನ್ನು ಸಾವುಕಾರರು ನುಂಗಿ ಬಿಡುತ್ತಿದ್ದಾರೆ. ಬಡವರಿಗೆ ರೊಟ್ಟಿ ಚಟ್ಣಿಗೂ ದಿಕ್ಕಿಲ್ಲದೆ ಅಸಂತೋಷ ತಾಂಡವವಾಡುತ್ತಿದೆ. ದಿನದಿನಕ್ಕೆ ಶಿಕ್ಷಣ ಬೆಳೆಯುತ್ತಿದ್ದರೂ ಇಂತಹ ಪ್ರಸಂಗವೇಕೆ ಸಂಭವಿಸಬೇಕು? ಮಾವಿನ ಮರಕ್ಕೆ ಲಿಂಬೆ ಕಾಯಿಯೆಂದೂ ಆಗುವದಿಲ್ಲ. ನಾವು ಮಾವಿನ ಮರವೆಂದು ಆನಂದದಿಂದ ಹತ್ತಿದ ಮರವು ಕಹಿಬೇವಿನದಿತ್ತೆಂದು ಸುಧಾಕರನಿಗೆ ಮನಗಾಣಹತ್ತಿತು.

ಈ ದೃಷ್ಟಿಯಿಂದ ಹಾಯ್‌ಸ್ಕೂಲ, ಕಾಲೇಜುಗಳಲ್ಲಿಯ ತನ್ನ ಮಿತ್ರರ ರೀತಿಯನ್ನು ಪರಿಶೀಲಿಸಹತ್ತಿದನು. ಶಿಕ್ಷಣದ ಅರ್ಥ ಸಾದಾತನದ ಪುರಸ್ಕಾರವಿರದೆ ವಿಲಾಸವನ್ನನುಭವಿಸುವದೇ ಆಗಿದೆ. ಮಗನ ಪರೀಕ್ಷೆಗೋಸ್ಕರ ತೆಗೆದ ಸಾಲ ತಂದೆಯನ್ನು ಮುಳುಗಿಸುತ್ತಿದ್ದರೂ ಕಾಲೇಜಿನಲ್ಲಿ ಮಗನು ಪ್ರತಿ ತಿಂಗಳು ಹೊಸಡ್ರೆಸ್ಸು ಹೊಲಿಸುವದನ್ನು ಬಿಡುವದಿಲ್ಲ. ಟೆನ್ನಿಸ್, ಹೊಕಿ, ಕ್ರಿಕೆಟ್ ಮೊದಲಾದ ಆಟ, ನಾಟಕ ಸಿನೇಮಾ ಮೊದಲಾದ ಮನರಂಜನೆಯ ಸಾಧನ, ಸೋಮವಾರ ಮಂಗಳವಾರ ವಿಶೇಷ ಪ್ರೊಗ್ರಾಮು ಇವುಗಳಲ್ಲಿಯೇ ತನ್ಮಯರಾಗಿರುತ್ತಾರೆ. ಮನೆಮಂದಿಗೆ ಎರಡು ಹೊತ್ತು ಊಟಸಿಗುವುದು ದುಸ್ತರವಾದರೂ, ಕಾಲೇಜಿನಲ್ಲಿ ದೇಶೀ ಸಾಹೇಬರಾದ ಇವರ ಚಿರಂಜೀವರಿಗೆ ಎಳೆಂಟು ಸಲವಾದರೂ ಚಹಾತೀರ್ಥ ಬಾಯಲ್ಲಿ ಬೀಳಲೇ ಬೇಕು. "ನಾಳೆ ಮಗನಿಗೆ ಹಣವೆಲ್ಲಿಂದ ಕಳಿಸಬೇಕೆ"ಂದು ತಂದೆ ಚಿಂತಿಸುತ್ತ ನಿದ್ದೆಯಿಲ್ಲದೆ ಹಾಸಿಗೆಯ ಮೇಲೆ ಹೊರಳಾಡುತ್ತಿರುವಾಗ, ಮಗನು ಸಿನೇಮಾದಲ್ಲಿಯ ಚುಂ

ಬಸವನ್ನು ಕಂಡು ನಲಿಯುತ್ತಿರಬೇಕು. ಇದಕ್ಕಿಂತ ಹೆಚ್ಚಿನ ದೈವೀ
ದುರ್ವಿಲಾಸವಿನ್ನಾವದು? ಸಾದಾತನ, ಶರೀರಶ್ರಮಕ್ಕೆ ಒಗ್ಗದವರು.
ಇನ್ನೊಬ್ಬರ ತುತ್ತಿಗೆ ಕುತ್ತಾಗಿಯೇ ಬಾಳಬೇಕಲ್ಲವೇ? ಸ್ವಾರ್ಥದ ವಿಷ
ವು ಪ್ರತಿಯೊಬ್ಬನಲ್ಲಿ ಹುಟ್ಟಂದಿನಿಂದಲೂ ಬೆರೆತಿರುತ್ತದೆ. ಅದರ ಹುಟ್ಟ
ಡಗಿಸುವುದೇ ಶಿಕ್ಷಣದ ಗುರಿಯಾಗಿರುತ್ತದೆ. ಆದರೆ ವಿಷವನ್ನು ತೆಗೆದು
ಹಾಕುವದಕ್ಕಾಗಿ ಕೊಟ್ಟ ಔಷಧ ವಿಷಕ್ಕಿಂತಲೂ ಹೆಚ್ಚಿಗೆ ಘಾತುಕ
ವಾಗಹತ್ತಿದರೆ ಅದಕ್ಕೆ ದೂರದಿಂದಲೇ ಶರಣು ಹೊಡೆಯುವದು
ಒಳಿತು.

ಚೆನ್ನಾಗಿ ಬೇರು ಬಿಟ್ಟ ಗಿಡಗಳು ಸಹ ದೊಡ್ಡ ಬಿರುಗಾಳಿಯಲ್ಲಿ
ಬುಡಗೂಡ ಕಿತ್ತು ಬೀಳುವಂತೆ ಸುಧಾಕರನ ಮನಸ್ಸಿನೊಳಗಿನ ಶಿಕ್ಷಣ
ವಿಷಯದ ಕಲ್ಪನೆಯು ಈ ಹೊಸ ಹೊಡೆತ ಬಿದ್ದೊಡನೆಯೇ ಸಮೂಲ
ಕುಸಿದು ಬಿತ್ತು. ನದಿಯ ನೀರನ್ನು ಉಗಮದಲ್ಲಿಯೇ ಹೊಲಸಾಗ
ಗೊಡಬಾರದು; ಅದರಂತೆ ಶಿಕ್ಷಣವು ಮೂಲದಲ್ಲಿಯೇ ನಿರ್ದೋಷಿ
ಯಾಗಿರಬೇಕೆಂದು ಮನಗಂಡ ಮೇಲೆ ಅವನಿಗೆ ಎಷ್ಟೋ ಹೊಸ
ಹೊಸ ವಿಚಾರಗಳು ಸೂಚಿಸಿದವು. ಸಾವಿರಾರು ವಿದ್ಯಾರ್ಥಿಗಳು ಮೆಟ್ರಿ
ಕ್ ನಪಾಸಾಗುತ್ತಾರೆಂದ ಮಾತ್ರಕ್ಕೆ ಅವರೆಲ್ಲ ಕೇವಲ ನಿರುಪಯೋಗಿ
ಯೆಂದು ಹೇಳಿದರೆ ಅನ್ಯಾಯವಾಗಬಹುದು ಶಿಕ್ಷಕ ಮತ್ತು ಪಾಲಕರ
ದುರ್ಲಕ್ಷ್ಯದಿಂದಾಗಿ ಎಷ್ಟೋ ವಿದ್ಯಾರ್ಥಿಗಳ ಅಭ್ಯಾಸ ಹಿಂದೆ ಬೀಳು
ತ್ತಿದೆ. ಎಷ್ಟೋ ವಿದ್ಯಾರ್ಥಿಗಳಿಗೆ ಸ್ವಭಾವತಃ ಈ ಶಿಕ್ಷಣದ ಕಡೆಗೆ ಒಲ
ವು ಇರುವದಿಲ್ಲ. ಸದ್ಯದ ಶಿಕ್ಷಣವೆಂದರೆ ಒಂದೇ ಯಂತ್ರದಿಂದ ಹೊರ
ಬೀಳುವ ಪಡಿಯಚ್ಚುಗಳು. ಭಾವೀ ಪೀಳಿಗೆಯಲ್ಲಿಯ ಕವಿ, ಚಿತ್ರಕಾರ,
ಗಾಯಕ, ಶಿಲ್ಪಿ, ವೈದ್ಯ, ತತ್ವಜ್ಞಾನಿ, ಸಂಶೋಧಕ, ಕಾರಖಾನೆದಾರ
ಒಕ್ಕಲಿಗ-ಎಲ್ಲರೂ ಒಂದೇ ರೀತಿಯ ಗಿಳಿಪಾಠದ ಶಿಕ್ಷಣ ಪಡೆಯುತ್ತಾರೆ.
ಖಾನಾವಳಿಯಲ್ಲಿ ಉಣ್ಣುವವನ ರುಚಿಯು ಕ್ರಮೇಣ ಕುಗ್ಗುವಂತೆ ಈ
ವಿದ್ಯಾರ್ಥಿಗಳಲ್ಲಿದ್ದ ನಿಸರ್ಗದತ್ತ ಒಲವು ಸಹ ಉತ್ತೇಜನದ ಅಭಾವ
ದಿಂದ ಲೋಪವಾಗಿ ಬಿಡುತ್ತದೆ. ಅಶಿಕ್ಷಿತ ಒಕ್ಕಲಿಗನಿಗಾದರೂ ಯಾವ

ಹೊಲದಲ್ಲಿ ಏನು ಬಿತ್ತಬೇಕೆಂದು ತಿಳಿಯುತ್ತಿದೆ. ಆದರೆ ಸರ್ವ ವಿದ್ವಾನರ ಆಗರವಾಗಿರುವ ವಿದ್ಯಾಪೀಠವು ಮಾತ್ರ ಬುದ್ಧಿಮತ್ತೆ, ಸಂಸ್ಕಾರ, ಸಾಂಪತ್ತಿಕ ಸ್ಥಿತಿ ಮತ್ತು ಮನಸ್ಸಿನ ಒಲವು—ಇವುಗಳಲ್ಲಿ ಭೂಮ್ಯಾಕಾಶದಷ್ಟು ಅಂತರವಿರುವ ವಿದ್ಯಾರ್ಥಿಗಳನ್ನು ಒಂದೇ ಗಾಣಕ್ಕೆ ಕಟ್ಟಿಬಿಡುತ್ತದೆ. ಶಿಕ್ಷಕರ ಶ್ರಮ, ವಿದ್ಯಾರ್ಥಿಗಳ ಆಯುಷ್ಯವನ್ನು ಸಾರ್ಥಕಗೊಳಿಸುವದಕ್ಕೆ ಈ ಬಗೆಯ ರಾಮಬಾಣ ಉಪಾಯ ಇನ್ನಾವುದೂ ಸಿಗಲಿಕ್ಕಿಲ್ಲ.

ವಿದ್ಯಾರ್ಥಿಗಳ ಪಾಲಕರಂತೂ ಈ ಕಡೆಗೆ ಲಕ್ಷ್ಯಹಾಕುವಂತಿಲ್ಲ ಯಾಕಂದರೆ ಪ್ರಚಲಿತ ಶಿಕ್ಷಣದ ಕಾಂಚನಮೃಗಕ್ಕೆ ಮಾರುಹೋಗಿದ್ದಾರೆ. ಟಿಳಕ ಆಗರಕರರ ಕಾಲದಲ್ಲಿ ಕಲಿತವರು ಕಡಿಮೆಯಿದ್ದುದರಿಂದ ಕಲಿತವರೆಲ್ಲರಿಗೂ ನೌಕರಿ ಸಿಗುತ್ತಿತ್ತು. ಆದರೆ ಈಗ ಬಿ. ಎ. ದ ಬೆಲೆ ಇಳಿದು ಮೆಟ್ರಿಕ್ಕದ ಮಾಲು ಪೇಟೆಯಲ್ಲಿ ಮಾರಾಟವಾಗುವದಿಲ್ಲವೆಂದು ಪಾಲಕರಿಗೆ ಖಚಿತವಾಗಿದ್ದರೂ ಹೊಸಹಾದಿಯನ್ನು ತುಳಿಯಲು ಅವರು ಸಿದ್ಧರಿಲ್ಲ. ಪಾಪ! ಅವರಾದರೂ ಏನು ಮಾಡಬೇಕು? ಶಿಕ್ಷಣವೇ ರಾಷ್ಟ್ರ ಸುಧಾರಣೆಯ ಅಡಿಗಲ್ಲೆಂದು ಗರ್ಜಿಸುವ ವಿದ್ಯಾವಂತರು ಸಹ ಈಗಿನ ರೀತಿಯನ್ನೇ ವಿಸ್ತಾರಗೊಳಿಸುವುದರಲ್ಲಿ ತನ್ಮಯರಾಗಿದ್ದಾರೆ. ಸದ್ಯ ಪಾಲಕರಿಗೆ ಫೀ ತೆರುವುದು, ಪ್ರಗತಿ ಪತ್ರಿಕೆಯ ಮೇಲೆ ಸಹಿಮಾಡುವುದು. ಇವಿಷ್ಟರ ಹೊರತು ಇನ್ನಾವ ಸಂಬಂಧವೂ ಬರುವದಿಲ್ಲ. ಹೊಟ್ಟೆಯ ಚಿಂತೆ ಹತ್ತಿರುವ ಪಾಲಕರಿಗೆ ಪರಿಸ್ಥಿತಿಯ ವಿಚಾರ ಮಾಡುವಷ್ಟು ವೇಳೆ, ಸಾಮರ್ಥ್ಯವಿರುವದಿಲ್ಲ. ಒಂದುವೇಳೆ ಯಾರಾದರೊಬ್ಬ ಯೋಚಿಸಿದರೆ ಪ್ರವಾಹದ ವಿರುದ್ಧ ಈಸುವ ಧೈರ್ಯ ಹೇಗೆ ಬರಬೇಕು?

ಮುಂಬಯಿ ವಿದ್ಯಾಪೀಠ ಆರಂಭವಾದ ನಂತರ ನಡೆದ ಪ್ರಗತಿಯನ್ನು ನೋಡಿದರೂ ನಿರಾಶೆಯೇ. ವಿದ್ಯಾಪೀಠಗಳಿಂದ ಹೊರಬಿದ್ದ ಸುಸಂಸ್ಕೃತರು ಸಂಸ್ಕೃತಿ, ವಾಙ್ಮಯ, ಸಂಶೋಧನ, ಆರ್ಥಿಕ ಪ್ರಗತಿಗಾಗಿ ಹೆಣಗಿದ್ದು ವಿರಳ. ಈ ಕಾಲದಲ್ಲಿ ಅನೇಕ ದೊಡ್ಡ ಸಂಬಳದ

ಹುದ್ದೆ ಪಡೆದಿರಬಹುದು, ವಕೀಲಿಯಿಂದ ಅನೇಕರು ಲಕ್ಷಾಧೀಶರಾಗಿರ ಬಹುದು; ರಾಜಕೀಯ, ಸಾಮಾಜಿಕ ಸುಧಾರಣೆಯನ್ನು ಕುರಿತು ಅನೇಕರು ಹರಟಿ ಕೊಟ್ಟಿರಬಹುದು. ಆದರೆ ಪ್ರತ್ಯಕ್ಷ ಕಾರ್ಯವಾದದ್ದು ಮಾತ್ರ ಅತ್ಯಲ್ಪ. ಪ್ರತಿಪದೆಯ ಚಂದ್ರಪ್ರಕಾಶದಿಂದ ಆಕಾಶವು ಬೆಳಗ ಬಲ್ಲುದೆ?

ಮನುಷ್ಯನು ಶಿಕ್ಷಣವನ್ನು ದುರುಪಯೋಗಗೊಳಿಸಿಕೊಂಡ ಮಾತ್ರಕ್ಕೆ ಶಿಕ್ಷಣವೇ ಕೆಟ್ಟದ್ದೆಂದು ಹೇಳಲು ಬಾರದು. ಇಂದಿನ ರೀತಿಯಿಂದ ದೇವನಾಗಬೇಕಿದ್ದ ಮಾನವ ದಾನವನಾಗಿದ್ದಾನೆ. ಮನಸ್ಸು ಮಾಡಿದರೆ ಇದನ್ನು ತಿದ್ದುವುದು ಅಸಂಭವವಲ್ಲ.

ಪ್ರಚಲಿತ ಶಿಕ್ಷಣಕ್ಕೆ ತಾನು ಮೋಸ ಹೋದೆನೆಂದು ತಿಳಿದಾಗ ಕಾಳಿ ಕೊಟ್ಟ ಕಾಂಚನಮೃಗಚಿತ್ರದ ನೆನಪಾಯಿತು. ಯಾವುದೇ ಕಾಂಚನಮೃಗಕ್ಕೆ ಮರುಳಾಗಿ ನಾನು ಮೋಸ ಹೊಂದಬಾರದೆಂದು ದೇವರು ಆತನಿಗೆ ಈ ಚಿತ್ರವನ್ನೇ ಬಿಡಿಸಲು ಪ್ರೇರೇಪಿಸಿರಬಹುದು. ತನ್ನ ಮನಸ್ಸು ಸ್ಥಿರವಾಗುವುದಕ್ಕೆ ಆ ಚಿತ್ರ ಯಾವಾಗಲೂ ಎದುರಿನಲ್ಲಿರುವುದು ಯೋಗ್ಯವೆಂದೆಣಿಸಿ ಸುಧಾಕರನು ಅದನ್ನು ಟ್ರಂಕಿನಿಂದ ಹೊರತೆಗೆದು ಮೇಜಿನ ಮೇಲ್ಗಡೆಯ ಗೋಡೆಗೆ ಹಚ್ಚಿದನು. ದೂರದಿಂದ ಅದು ಹೇಗೆ ಕಾಣುತ್ತದೆಂಬುದನ್ನು ನೋಡುವುದಕ್ಕಾಗಿ ಅವನು ಇನ್ನೊಮ್ಮೆ ಚಿತ್ರದ ಕಡೆ ನೋಡಿದಾಗ "ಈ ಚಿತ್ರದಲ್ಲಿಯ ಸೀತೆಯ ಕಣ್ಣು ನಿಜವಾಗಿಯೂ ವಾರುಣಿಯ ಕಣ್ಣಿನಂತಿದೆಯೋ ಅಥವಾ ನನಗೆ ಹಾಗೆ ಕಾಣುತ್ತಿದೆಯೋ?" ಎಂದು ತನ್ನಷ್ಟಕ್ಕೆ ಅಂದುಕೊಂಡನು.



# ಪ್ರಕರಣ ೨೬.

ಕೆಲವು ದಿನಗಳಲ್ಲಿಯೆ ಸುಧಾಕರನ ಹುಟ್ಟಿದ ದಿನ ಬಂತು. ಎಷ್ಟೋ ವರ್ಷಗಳ ನಂತರ ಇಂದು ಅವನಿಗೆ ತನ್ನ ಹುಟ್ಟು ಹಬ್ಬದ ದಿನ ಮನೆಯಲ್ಲಿರುವ ಯೋಗ ಬಂದಿತ್ತು. ಆದರಿಂದ ಈ ಹಬ್ಬವನ್ನು ವಿಜೃಂಭಣೆಯಿಂದ ಜರುಗಿಸಬೇಕೆಂದು ತಾಯಿಯ ಮನಸ್ಸು. ಸ್ವಾಮಿಯವರಿಗೆ ಭಿಕ್ಷೆ ಹೇಳಬೇಕೆಂದು ಮಾಡಿದ್ದಳು. ಆದರೆ ಅವರು ಒಲ್ಲೆಂದರು. ರಾವಸಾಹೇಬ, ದಾದಾಸಾಹೇಬರ ಮನೆಯಲ್ಲಿ ಎಲ್ಲರಿಗೆ ಆಮಂತ್ರಣ ಕೊಟ್ಟಿದ್ದರೂ ಸುಧೆ, ವಾರುಣಿಯರ ಹೊರತು ಇನ್ನಾರೂ ಬರಲಿಲ್ಲ ಉಳಿದವರೆಲ್ಲ ಒಂದೊಂದು ನೆವಹೇಳಿ ತಪ್ಪಿಸಿಕೊಂಡರು. ಸುಧಾಕರನು ಸಾಲೆಗೆ ಹೋಗಬೇಕಾದುದರಿಂದ ಹತ್ತು ಘಂಟೆಯೊಳಗೇ ಊಟಕ್ಕೆ ಬಡಿಸಿದರು.

"ಅಮ್ಮಾ, ಇನ್ನೂ ಎಷ್ಟು ದಿನ ನನ್ನ ಹುಟ್ಟು ಹಬ್ಬ ಮಾಡುವವಳು ನೀನು? ನನ್ನ ಬೆಳವಣಿಗೆಯಿನ್ನೂ ಮುಗಿದಿಲ್ಲವೇ?"

"ನಿನ್ನ ಕೈಗಳ ಬೆಳವಣಿಗೆಯಿನ್ನೂ ಆಗಿಲ್ಲವಲ್ಲ!"

"ಮಗನ ಎರಡು ಕೈ ನಾಲ್ಕು ಕೈ ಆಯಿತೆಂದರೆ ತಾಯಿಯ ಕೈ ಆಕಾಶಕ್ಕೆ ಮುಟ್ಟಿದಂತೆ"

"ಆಕಾಶಕ್ಕೆ ಕೈ ಮುಟ್ಟದ ಹೊರತು ದೇವರು ದೊರೆಯುವದಿಲ್ಲ."

"ಹಾಗಾದರೆ ದೇವರನ್ನು ಒಲಿಸಲು ಸಾಧುಸಂತರು ಸುಮ್ಮನೆ ಕಷ್ಟ ಪಡುತ್ತಿರುವರು ಒಂದೇ ಸವನೆ ತಮ್ಮ ಮಕ್ಕಳ ಮದುವೆ ಮಾಡುತ್ತ ಕುಳಿತಿದ್ದರೆ ಸಾಕಿತ್ತು."

"ಇಂದು ಆ ದೇವರನ್ನು ಚೇಷ್ಟೆ ಮಾಡಿದರೂ ನಾಳೆ ನಿನ್ನ ದೇವನ ಸಲುವಾಗಿ ಅವನನ್ನು ಪೂಜಿಸುವಿ. ನಿನ್ನ ದೇವನು ಕಾಯಿಲೆಯಿಂದ ಬಿದ್ದರೆ ನೀನು ಡಾಕ್ಟರರ ಕಡೆ ಓಡುವಿ."

"ದೇವನೂ ಕಾಯಿಲೆ ಬೀಳುವನೇ?"

"ದೇವನಿಗೆ ಎಲ್ಲವೂ ಆಗುತ್ತಿದೆ."

ಜಾನಕಮ್ಮ ಬಡಿಸುವದನ್ನು ಬಿಟ್ಟು ಒಲೆಯ ಕಡೆ ಹೋದಳು. ತಾಯಿ ಮಕ್ಕಳ ಪ್ರೇಮ ಪೂರಿತ ಉತ್ತರ ಪ್ರತ್ಯುತ್ತರಗಳನ್ನು ಕೇಳುತ್ತ ಸುಧೆ, ವಾರುಣಿಯರ ಕೈತುತ್ತು ಕೈಯಲ್ಲಿಯೇ ಉಳಿದವು.

ಸುಧಾಕರನು ಊಟವಾದೊಡನೆಯೇ ಗಡಿಬಿಡಿಯಿಂದ ಸಾಲೆಗೆ ಹೊರಟು ಹೋದನು. ಅತ್ತಿಗೆಗೆ ದಿನ ತುಂಬಿದ್ದರಿಂದ ಮುಂದೆ ಬಾಣಂತಿತನಕ್ಕೆ ಸುಧೆಯು ಬೇಕಾಗಬಹುದೆಂದು ದಾದಾಸಾಹೇಬರು ಮನೆಯಲ್ಲಿ ಇನ್ನೊಬ್ಬ ಅಡಿಗೆಯವಳನ್ನು ಇಟ್ಟಿದ್ದರಿಂದ ಸುಧೆಗೆ ಯಾವ ಗಡಿಬಿಡಿ ಇರಲಿಲ್ಲ. ವಾರುಣಿಯು ಸಾಲೆ ಅವಳ ಕೈಯಲ್ಲಿಯೇ ಇತ್ತು. ಹೀಗಾಗಿ ಜಾನಕಿಯಮ್ಮನ ಊಟ ಮುಗಿಯುವವರೆಗೆ ಸುಧೆ, ವಾರುಣಿಯರು ಮಾತಾಡುತ್ತ ಕುಳಿತರು ಊಟ ಮುಗಿದೊಡನೆಯೇ ಸುಧೆಯು ಎಂಜಲು ತೆಗೆಯ ಹತ್ತಿದಳು. ಎಲ್ಲರೂ ಕೆಲಸ ಮಾಡುವಾಗ ತಾನು ಸುಮ್ಮನೇ ಕೂಡ್ರುವದು ವಾರುಣಿಗೆ ಜೀವದ ಸುತ್ತು ಬಂದದ್ದರಿಂದ ಪಾತ್ರೆಯನ್ನು ಹೊರಗಿಡಲು ಉದ್ಯುಕ್ತಳಾದಳು.

"ವಾರು, ಅತಿಥಿಗಳಿಂದೂ ಕೆಲಸ ಮಾಡಬಾರದು "

"ಅತಿಥಿಗೆ ಬಾಯಿ ಮಾತ್ರ ಇರುತ್ತದೆಯೇ ಹೊರತು, ಕೆಲಸ ಮಾಡಲು ಕೈಕಾಲು ಇಲ್ಲವೆಂದು ಭಾವಿಸಿರುವಿರಾ?"

"ಹಾಗಲ್ಲ, ಅತಿಥಿಯೆಂದರೆ ದೇವರು. ದೇವರು ಗುಡಿಯಲ್ಲಿ ಸುಮ್ಮನೆ ಕುಳಿತುಕೊಳ್ಳುವಂತೆ ಅತಿಥಿಗಳೂ ಸುಮ್ಮನಿರಬೇಕು."

"ಹಾಗಾದರೆ ನೀವೂ ನನ್ನಂತೆ ಅತಿಥಿಗಳಲ್ಲವೇ?"

"ಸುಧೆಯು ಈಗೆರಡು ತಿಂಗಳಿಂದ ನಮ್ಮ ಸಂಸಾರ ನಡಿಸುತ್ತಿದ್ದಾಳೆ. ಅವಳು ನನ್ನ ಪಾಲಿಗೆ ಅತಿಥಿಯಲ್ಲ." ಎಂದು ಜಾನಕಮ್ಮ ಹೇಳಿದಳು.

ಮನೆಗೆಲಸ ಮುಗಿದ ಮೇಲೆ ವಾರುಣಿಯು ಸುಧೆಯನ್ನು ಕರೆದು ಕೊಂಡು ಇಡೀ ಮನೆಯನ್ನೆಲ್ಲ ನೋಡಿದಳು. ಸುಧಾಕರನ ಕೋಣೆಯಲ್ಲಿ ಕಾಳಿಯ ಫೋಟೋ ಇತ್ತು.

"ಇವರು ಯಾರು?"

"ಕಾಳಿ."

ಇವರು ಸುಧಾಕರನ ಗೆಳೆಯರಿರಬೇಕು "

"ಅಹುದು. ಜೀವದ ಗೆಳೆಯರು. ಇಲ್ಲಿಂದ ಉಪ್ಪುದ್ಧ ಪತ್ರ ಹೋಗುತ್ತಿದೆ."

"ಇವರನ್ನು ಎಲ್ಲಿಯೋ ನೋಡಿದ ಹಾಗಿದೆ." ಎಂದು ವಾರುಣಿಯು ಚಿತ್ರವನ್ನು ದಿಟ್ಟಿಸಿ ನೋಡಹತ್ತಿದಳು. ಅತಿ ಸಣ್ಣ ಜಲಾಶಯದಲ್ಲಿಯೂ ಆಕಾಶದ ಸುಂದರ ನೀಲಿಮೆಯು ದೃಗ್ಗೋಚರವಾಗುವಂತೆ ಆ ಸಣ್ಣ ಚಿತ್ರದಲ್ಲಿಯೂ ಕಾಳಿಯ ಸರಳ ಸ್ವಭಾವ, ಸೌಂದರ್ಯ ಲಾಲಸೆ ಒಡಮೂಡಿದ್ದವು.

"ವಾರು, ಈ ಪರಿಚಯ ಹಿಂದಿನ ಜನ್ಮದ್ದಿರಲಿಕ್ಕಿಲ್ಲವಷ್ಟೇ?"

"ಛೇ! ಇದೇ ಜನ್ಮದ್ದು."

"ಇನ್ನು ಮುಂದೆ ಆಗುವದಿದೆಯೋ ಏನೋ! ಒಬ್ಬರಂತೆ ಇನ್ನೊಬ್ಬರಿರುವದೇನೂ ಅಸಂಭವವಲ್ಲ."

"ನೆನಪಾಯಿತು ನೋಡಿ; ಕಳೆದ ವರ್ಷ ಮುಂಬಯಿಯ ಸರದಾರ ಗೃಹದಲ್ಲಿ ಕಂಡಿದ್ದೆ."

"ಅವರೇನು ಸರದಾರರಲ್ಲ; ವರ್ಷ್ಹಾಡದಲ್ಲೊಂದು ಮಾಲಕಿಯ ಗಿರಣಿಯಿದೆಯಂತೆ."

"ಮುಂಬಯಿಯಲ್ಲಿ ಯಾವುದಾದರೊಂದು ಕಾರ್ಯಾರ್ಥವಾಗಿ ಬಂದಿರಬಹುದು."

"ಶಾಂಗಲಿಯಲ್ಲಿ ಕಲಿಯುತ್ತಾರಂತೆ. ಅವರು ಒಳ್ಳೆಯ ಚಿತ್ರಕಾರರು. ಇಲ್ಲಿಯೇ ಅವರು ತೆಗೆದ ಕಾಂಚನಮೃಗ ಚಿತ್ರವಿದೆ. ನೋಡಿ, ಇದರಲ್ಲಿಯ ಸೀತೆ ಯಾರ ಕಣ್ಣು ಕದ್ದಿದೆಯೆಂದು ಹೇಳ ಬಲ್ಲಿರಾ?"

"ಉಹುಂ"

"ನಿಮ್ಮದೇ."

"ನನ್ನದು?" ವಾರುಣಿಗೆ ಆಶ್ಚರ್ಯವಾಯಿತು. ಆ ಚಿತ್ರದಲ್ಲಿ ಸೀತೆಯ ಕಣ್ಣು ತನ್ನ ಕಣ್ಣನ್ನು ಹೋಲುವದೆಂತು ಎಂಬ ವಿಚಾರದಲ್ಲಿ ಬಿದ್ದು ಬಿಟ್ಟಳು.

"ವಾರು, ಚಿತ್ರ ಚನ್ನಾಗಿದೆಯಲ್ಲವೇ?"

"ಬಹಳ ಚನ್ನಾಗಿದೆ ಇದು ಸುಧಾಕರರಿಗೆ ಬಹಳ ಪ್ರೀತಿಯುಳ್ಳದ್ದಾಗಿರಬೇಕು. ಅದಕ್ಕಾಗಿಯೇ ಎಲ್ಲರ ಕಣ್ಣಿಗೆ ಬೀಳುವ ಸ್ಥಳದಲ್ಲಿಟ್ಟದ್ದಾರೆ."

"ಆ ಚಿತ್ರದ ಕಡೆಗೆ ಎಷ್ಟು ನೋಡಿದರೂ ಸಾಕೆನಿಸುವದಿಲ್ಲ. ಅದರ ಅರ್ಥವನ್ನು ನನಗವರು ತಿಳಿಸಿದ್ದಾರೆ."

"ಅವರೆಂದರೆ ಯಾರು?"

"ಸುಧಾಕರರು. ಎಂಬ ಶಬ್ದ ಸುಧೆಯ ತುಟಿಯಿಂದ ಅಸ್ಪಷ್ಟವಾಗಿಯೇ ಹೊರಬಿತ್ತು. ಹೃದಯದಲ್ಲಿಯೇ ಇಡುವಂತಹ ಶಬ್ದ ಗಡಬಿಡಿಯಲ್ಲಿ ಹೊರಬೀಳಲು ಆನುವು ಮಾಡಿಕೊಟ್ಟದ್ದಕ್ಕಾಗಿ ಅವಳ ಗಲ್ಲವು ತುಟಿಯ ಮೇಲೆ ಸಿಟ್ಟುಗೊಂಡಿತು.

"ಅದರ ಅರ್ಥವೇನು ಹೇಳಿದರು.? ಅವರ ಹೇಳಿಕೆ ಯಾವಾಗಲೂ ಒಳ್ಳೆಯದಾಗಿಯೇ ಇರುತ್ತಿದ. ಅವರು ಕಲಿಸಹತ್ತಿದರೆ ವೇಳೆ

ಯಾದದ್ದೇ ತಿಳಿಯುವದಿಲ್ಲ. ಅವರ ಮಾತು ಆರಂಭವಾಯಿತೆಂದರೆ ಎಳೆ ಬಿಸಿಲಲ್ಲಿ ಆ ಹೂವಿನಿಂದ-ಈ ಹೂವಿಗೆ ಹಾರುವ ಪಾತರಗಿತ್ತಿಯಂತೆ ನಮ್ಮ ಮನಸ್ಸು ಹಾರಾಡಹತ್ತುತ್ತಿದೆ. ಅವರ ಹೆಂಡತಿಯಾಗುವ ಹುಡುಗಿಯ ಭಾಗ್ಯ ನಿಜವಾಗಿಯೂ ದೊಡ್ಡದು........"

ವಾರುಣಿಯು ಮಾಡಿದ ಸುಧಾಕರನ ಸ್ತುತಿ ಸುಧೆಗೆ ಸೇರಲಿಲ್ಲವೆಂತಲ್ಲ. ಆದರೆ ಅವಳ ಕೊನೆಯು ವಾಕ್ಯ ಸುಧೆಗೆ ನಾಚಿಕೆಯನ್ನುಂಟು ಮಾಡಿತು. ಮರುಕ್ಷಣದಲ್ಲಿಯೇ ನನ್ನ ಭಾಗ್ಯ ಅಷ್ಟು ದೊಡ್ಡದಿರಬಹುದೇ ಎಂಬ ಶಂಕೆಯೂ ಉತ್ಪನ್ನವಾಯಿತು. ಸ್ವಾಮಿಯವರ ನೆನಪಾದುದರಿಂದ ಆ ಶಂಕೆ ದುರ್ದೈವದ ರೂಪತಾಳಿತು. ಈ ಬದಲಾವಣೆಗಳಿಂದ ಕಣ್ಣಲ್ಲಿ ನೀರೂರಿತು.

"ಸುಧಾ, ನಿಮಗೇನಾಯಿತು? ಮನಸ್ಸಿಗೆ ಹತ್ತುವಂತಹ ಮಾತು ಆಡಿದೆನೇ?"

"ಇಲ್ಲ, ಈ ಚಿತ್ರ ನೋಡಿದಾಗ ನನಗೆ ಹೀಗೇ ಕೆಡಕೆನಿಸುತ್ತಿದೆ. ಆ ಕಾಂಚನಮೃಗವನ್ನು ನೋಡಿ ಸೀತಾ ಮಾತೆಗೆ ಯಾವ ಮಂಕುಬಡಿಯಿತೋ ದೇವರೇ ಬಲ್ಲ. ತಾವಾಗಿಯೇ ದುಃಖವನ್ನು ಆಮಂತ್ರಿಸಿಕೊಂಡಂತೆ ರಾವಣನ ಬಂದಿಯಲ್ಲಿ ಬಿದ್ದರು. ಆದರಂತೆಯೇ ನಾವು ಹೊರಗಿನ ಬೆಡಗಿಗೆ ಬಲಿಬಿದ್ದು ಹುಸಿಸುಖದ ಬೆನ್ನುಹತ್ತಿ ನಿಜವಾದ ಸುಖಕ್ಕೆ ಎರವಾಗುತ್ತೇವೆ."

"ಸುಧಾಕರರ ಹಾಗೆಯೇ ಮಾತನಾಡಿದಿರಿ. ಅವರನ್ನು ಎಲ್ಲಿಯಾದರೂ ಹೃದಯದಲ್ಲಿ ಅಡಗಿಸಿಲ್ಲವಷ್ಟೇ!"

"ಹೋಗಿ ಅಂದರೆ ......."

"ಸುಧೆಯಕ್ಕಾ, ನನ್ನದೊಂದು ಕೆಲಸ ಹೇಳಲೇ?"

"ಹೂಂ, ಸಂಕೋಚವೇಕೆ? ಹೇಳಿ."

"ನಾವೀಗ ಸಮುದ್ರತೀರಕ್ಕೆ ಹೋಗೋಣ"

"ಈಗ, ಈ ಮಟ ಮಟ ಮಧ್ಯಾಹ್ನದಲ್ಲಿ?"

"ಅಹುದು. ಇತರ ವೇಳೆಯಲ್ಲಿ ನನಗೆ ಹೋಗಲಿಕ್ಕೇ ಆಗುವದಿಲ್ಲ. ಬೆಳಗ್ಗೆ ಅಭ್ಯಾಸ, ಮಧ್ಯಾಹ್ನ ಶಾಲೆ, ಶಾಲೆಬಿಟ್ಟನಂತರ ತಂದೆಯವರ ಸಂಗಡ ತಿರುಗಾಟ. ಹೀಗಾಗಿ ಒಂದು ದಿನವೂ ಬಿಡುವಿಲ್ಲ."

ಅಂತೂ ಇಂತೂ ಜಾನಕಿಯಮ್ಮನ ಒಪ್ಪಿಗೆ ದೊರಕಿಸಿಯಾಯಿತು. ರಸ್ತೆ ದಾಟಿ ಮಳಲಮಾರ್ಗವನ್ನು ಸೇರಿದರು.

"ಸುಧೆಯಕ್ಕ, ನಾವೀಗ ಸಮುದ್ರ ನೋಡುವುದಕ್ಕೆ ಹೋಗುವದೆಂದು ಭಾವಿಸಿರುವೆಯಾ?"

"ಅಹುದು, ಸಮುದ್ರ ನೋಡುವದಲ್ಲದೆ ಇನ್ನಾವ ಕೆಲಸವಿದೆ?"

"ಸ್ವಾಮಿಯವರ ದರ್ಶನ."

ಸ್ವಾಮಿಯವರ ಹೆಸರನ್ನು ಕೇಳಿದೊಡನೆ ಸುಧೆಯು ಅಲ್ಲಿಗೆ ಹೋಗಬೇಕೋ ಹೋಗಬಾರದೋ ಎಂಬ ವಿಚಾರದಲ್ಲಿ ಬಿದ್ದುಬಿಟ್ಟಳು. "ಮೊನ್ನೆ ಸುಧಾಕರನ ಜೊತೆಯಲ್ಲಿ ನನ್ನನ್ನು ಕಂಡದ್ದರಿಂದ ಅವರು ಯಾವ ವಿಪರೀತ ಕಲ್ಪನೆ ಮಾಡಿಕೊಂಡಿದ್ದಾರೋ ಏನೋ? ಮನೆಗೆ ಮರಳೋಣವೆಂದರೂ ವಾರುಣಿಗೆ ಬೇಸರವಾದೀತು" ಅಲ್ಲದೆ ಮನೆಗೆ ಹೋಗಲಿಕ್ಕೆ ಯಾವ ನಿಮಿತ್ತವೂ ಇದ್ದಿಲ್ಲ.

ಹೇಗೂ ಮನಸ್ಸು ಗಟ್ಟಿಮಾಡಿ ಮುಂದೆ ನಡೆಯಹತ್ತಿದಳು. ಉಸುಕಿನ ದಿನ್ನೆಯೊಂದನ್ನು ಏರಿದಾಗ ಎರಡು ಸೌಂದರ್ಯ ಸಾಗರದ ಗಡಿಯಮೇಲೆ ನಿಂತಂತೆ ಭಾಸವಾಯಿತು. ಬಲಬದಿಗೆ ಹಚ್ಚಹಸುರಿನ ಭತ್ತದ ಗದ್ದೆಯಿಂದ ತುಂಬಿದ ಉದ್ಯಾನವು ತೂಗಾಡುತ್ತಿತ್ತು. ಎಡಗಡೆಗೆ ಸೂರ್ಯನ ತೇಜಸ್ವೀ ಕಿರಣಗಳಿಂದ ಶೃಂಗರಿಸಲ್ಪಟ್ಟ ಸಮುದ್ರವು

ಅಲುಗಾಡುತ್ತಿತ್ತು. ಒಂದೆಡೆ ಗಾಳಿಯು ಅಲೆದಾಟಕ್ಕೆ ಛತ್ರದ ಸಸಿಗಳು ತಲೆದೂಗುತ್ತಿದ್ದರೆ ಇನ್ನೊಂದೆಡೆ ನೀರಹರಿವೆಗಳು ಮಂಜುಲ ಗಾನ ಮಾಡುತ್ತಿದ್ದವು. ಅವರು ಮುಂದೆ ಹೋಗ ಹತ್ತಿದಂತೆ ಸಮುದ್ರದ ಸಹ ವಾಸದಿಂದ ಉಸುಕಿನ ದಂಡೆಯು ನರ್ತಿಸಲು ಕಲಿತಿದ್ದರಿಂದಲೋ ಏನೋ, ಉಸುಕಿನ ಚಿಕ್ಕ ಕಣಗಳು ಒಂದಿನ್ನೊಂದರ ಬೆನ್ನುಹತ್ತಿ ಹವೆ ಯಲ್ಲಿ ಓಡುತ್ತಿದ್ದವು. ಸೂರ್ಯಕಿರಣಗಳಿಂದ ಸಮುದ್ರದ ನೀರು ಖಡ್ಗದ ಧಾರೆಯಂತೆ ಚಕಚಕಿಸುತ್ತಿತ್ತು. ತೆರೆಗಳ ಕ್ರೀಡೆಯನ್ನು ನೋಡುವ ಮೋಹ ತಡೆಯಲಾರದೆ ಶಿವಮಂದಿರದ ಕಡೆಗೆ ತಿರುಗುವುದನ್ನು ಬಿಟ್ಟು ನೀರೊಳಗೆ ಹೋಗಿ ನಿಂತರು. ಕಾಲಬುಡದಿಂದ ಸರ್ರನೆ ಜಾರಿಹೋಗು ವ ಉಸುಕು-ಮೇಲಿಂದ ಕೆಡೆದು ಬೀಳುವ ಚಿಕ್ಕ ತಡಸಲಿನಂತೆ ತೋರುವ ತೆರೆಗಳ ಸಾಲು, ಕಿನಾರೆಗೆ ಬಂದೊಡನೆ ತೆರೆಗಳು ವರ್ತುಲಾ ಕಾರವಾಗಿ ಆಡುವ ಆಟ, ಕುಪ್ಪಸದಂಚಿನ ಝಾಲರಿಯಂತೆ ತೋರು ವ ಆ ತೆರೆಗಳ ಮೇಲಿನ ನೊರೆ, ಇವೆಲ್ಲವನ್ನು ಎಷ್ಟು ನೋಡಿದರೂ ಸಾಕೆನ್ನಿಸುತ್ತಿದ್ದಿಲ್ಲ.

"ಸುಧೆಯಕ್ಕಾ, ಸಮುದ್ರವನ್ನು ಕಂಡಾಗ ನಿಮಗೆ ಏತರ ನೆನಪಾ ಗುತ್ತಿದೆ?"

"ನೈಜಪ್ರೇಮದ ನೆನಪು."

"ಅದೇಕೆ?"

"ಇವೆರಡರ ಅಂತಪಾರವನ್ನು ಯಾರೂ ಅರಿಯಲಾರರೆಂದು."

"'ಯಾರು ಎಷ್ಟೇ ನೀರು ಒಯ್ದರೂ ಕೊರತೆಯಾಗುವದಿಲ್ಲವಾದ್ದ ರಿಂದ ನನಗೆ ಸಮುದ್ರವನ್ನು ಕಂಡಾಗಲೆಲ್ಲ ಶ್ರೀಮಂತ ಮನುಷ್ಯನ ನೆನ ಪಾಗುತ್ತಿತ್ತು. ಆದರ ಈಗ ಅವನೊಬ್ಬ ಕಲಾವಂತನೆಂದು ಭಾವನೆ ಯಾಗಿದೆ. ಸಂಜೆ ಮುಂಜಾವುಗಳಲ್ಲಿ ಚಿತ್ರಿಸುತ್ತ-ಹಗಲಿರುಳು ಹಾಡು ತ್ತ-ಜಲತುಷಾರಗಳಿಂದ ಅನವರತವೂ ದಂಡೆಯ ಮೇಲೆ ತರತರದ ಹೂಬಳ್ಳಿಗಳನ್ನು ಬಿಡಿಸುತ್ತಿರುವುದು ಕಲಾವಂತರ ಲಕ್ಷಣವಲ್ಲವೇ?"

"ನಿಮ್ಮಂತೆ ಕಲಿತಿದ್ದರೆ ನಾನೂ ಸರಿಯಾದ ಉತ್ತರಕೊಡುತ್ತಿದ್ದೆ."

ಸುಮಾರು ಹೊತ್ತಿನ ವರೆಗೆ ಅವರಿಬ್ಬರೂ ಆ ಶಿವಮಂದಿರದ ಕಡೆಗೆ ಹೊರಟರು. ದಿನ್ನೆಯನ್ನು ಹತ್ತುವಾಗ ವಾರುಣಿಯು ಸುಧೆಯ ಮುಂದೆ ತನ್ನ ಹೃದಯವನ್ನು ಬಿಚ್ಚಿಟ್ಟಳು. ಸುಧಾಕರನ ನಡತೆ ಹಾಗೂ ಶಿಕ್ಷಣದ ಪರಿಣಾಮ ಆಕೆಯ ಮೇಲೆ ಚನ್ನಾಗಿ ಬಿದ್ದುದರಿಂದ ತನ್ನಿಂದ ಸತ್ಕಾರ್ಯವೇನಾದರೂ ಘಟಿಸಬೇಕೆಂದು ಆಕೆಗೆ ಅನಿಸುತ್ತಿತ್ತು. ವರ ಶೋಧಕ್ಕಾಗಿ ತಂದೆ ಕೊಡುತ್ತಿರುವ ಶಿಕ್ಷಣದ ಬಗ್ಗೆ ಆಕೆಗೆ ಬೇಸರ ಬಂದಿತ್ತು, ಮೈಮೇಲೆ ಬೆಲೆಯುಳ್ಳ ವಸ್ತ್ರಾಲಂಕಾರವಿದ್ದರೂ ಯಾವುದೋ ಕೊರತೆಯೊಂದು ಬಾಧಿಸುತ್ತಿದೆಯೆಂದು ಅನಿಸಹತ್ತಿದಂದಿನಿಂದ ಆಕೆಗೆ ಮನಸ್ವಾಸ್ಥ್ಯವಿಲ್ಲದೆ ಹೋಗಿತ್ತು. ಸುಧಾಕರನಲ್ಲಿ ಆವಳಿಗೆ ಸಂಪೂರ್ಣ ಆದರವಿತ್ತು. ಆದರೆ ಆ ಆದರವು ಉತ್ಕಟ ಪ್ರೇಮವಾಗಿ ಮಾರ್ಪಡುವದು ಶಕ್ಯವಿದ್ದಿಲ್ಲ. ಆಕಾಶದಲ್ಲಿಯ ಧ್ರುವನಕ್ಷತ್ರವು ಘೋರಾಂಧಃಕಾರದಲ್ಲಿಯೂ ನೌಕೆಗೆ ಯೋಗ್ಯಮಾರ್ಗ ತೋರಿಸುತ್ತಿದೆ. ಆದರೆ ನೌಕೆಯು ಪೃಥ್ವಿಯನ್ನು ಸುತ್ತುಹಾಕಿದರೂ ಧ್ರುವನಕ್ಷತ್ರವನ್ನು ತನ್ನ ಅಂಕಿತದಲ್ಲಿ ತೆಗೆದುಕೊಳ್ಳಲಾರದು. ತನ್ನ ಆಯುಷ್ಯದಲ್ಲಿ ಸುಧಾಕರನ ಸ್ಥಾನವು ಈ ಧ್ರುವ ನಕ್ಷತ್ರದಂತೆ ಇರುತ್ತದೆಂಬುದು ಸ್ಪಷ್ಟವಾಗಿ ಕಾಣುತ್ತಿದ್ದುದರಿಂದ ವಾರುಣಿಗೆ ಅವನ ವಿಷಯದಲ್ಲುಂಟಾದ ಆಕರ್ಷಣವು ಕೊನೆಗೆ ಆದರದ ರೂಪತಾಳಿತು.

ಇಬ್ಬರೂ ಸಾವಕಾಶವಾಗಿ ದಿನ್ನೆಯನ್ನೇರುತ್ತಾ ಇದ್ದರು. "ಸುಧಾ, ಮಧುಕರರಿಗಿಂತ ಸುಧಾಕರರು ಎಷ್ಟೋ ಒಳ್ಳೇಸ್ವಭಾವದವರಲ್ಲವೇ? ಸುಧಾಕರರು ನನಗೆ ಕಲಿಸಲು ಬಂದಾಗ ಒಮ್ಮೆಯೂ ಮಧುಕರರ ಟೀಕೆ ಮಾಡಿದುದಿಲ್ಲ. ಆದರೆ ಮಧುಕರರು ಮಾತ್ರ ಸಂದರ್ಭ ಸಿಕ್ಕಾಗಲೆಲ್ಲ ಸುಧಾಕರರ ಟೀಕೆ ಮಾಡಲು ಹಿಂದೆ ಮುಂದೆ ನೋಡುವದಿಲ್ಲ. ಈಗ ಎಂಟು ದಿನಗಳ ಹಿಂದೆ ಮಧುಕರರು ನನ್ನ ತಂದೆಯಿಂದ ನನ್ನದೊಂದು ಫೋಟೋ, ತಮ್ಮ ಕವಿತೆಯ ಪುಸ್ತಕದಲ್ಲಿ ಹಾಕುತ್ತೇವೆಂತ ಒಯ್ದಿರುವರಂತೆ. ತಂದೆಯವರೂ ಅಷ್ಟರವರೇ! ಫೋಟೋ ಛಾಪಿಸಿ

ಬಂತೆಂದರೆ ಯಾವನಾದರೊಬ್ಬ ಆಯ್ ಸಿ.ಎಸ್.ಗಂಡ ನನ್ನನ್ನು ಕೇಳ ಬರುವರೆಂದು ಆಸೆ. ಈ ಫೋಟೋ ಕಂಡರೆ ಸುಧಾಕರರಿಗೆ ತಾನು ಕಲಿಸಿದ್ದೆಲ್ಲ ನೀರಲ್ಲಿ ಹೋಮವಾಯಿತೆಂದು ಅನಿಸಲಿಕ್ಕಿಲ್ಲವೇ?"

ವಾರುಣಿಯು ಅಳಹತ್ತಿದಳು. ಸುಧೆಯ ಹೃದಯ ಕರಗಿಬಿಟ್ಟಿತು.

"ವಾರೂ, ಚಿಂತೆಮಾಡಬೇಡ. ಇದರಲ್ಲಿ ನಿನ್ನ ತಪ್ಪಿಲ್ಲವೆಂದು ಸುಧಾಕರರಿಗೆ ಹೇಳುತ್ತೇನೆ."

"ಹೇಳುವಿರಲ್ಲವೇ?"

"ಹೂಂ, ನಿಜವಾಗಿಯೂ ಹೇಳುವೆ"

"ನನ್ನ ಕೊರಳಾಣೆಯಾಗಿಯೂ ಹೇಳುವಿರಲ್ಲವೇ?"

ವಾರುಣಿಯು ಸುಧೆಯ ಕೈಯನ್ನು ತನ್ನ ಕುತ್ತಿಗೆಯ ಹತ್ತಿರ ಒಯ್ದಳು. ತಾನು ವಾರುಣಿಯ ಕೊರಳಾಣೆ ತೆಗೆದುಕೊಳ್ಳದಿದ್ದರೇ ಒಳಿತಾಗುತ್ತಿತ್ತೆಂದು ಸುಧೆಗೆ ಅನಿಸಹತ್ತಿತು. ನನ್ನ ಮತ್ತು ಸುಧಾಕರರ ವಿವಾಹದಲ್ಲಿ ಮೊದಲೇ ಸಾವಿರಾರು ಪರ್ವತಪ್ರಾಯ ವಿಘ್ನಗಳು ನಿಂತಿರುವಾಗ ರೂಪಸಿಯಾದ ವಾರುಣಿಯು ತನ್ನನ್ನು ಪ್ರೀತಿಸುತ್ತಿರುವಳೆಂಬ ಇನ್ನೊಂದು ಹಿಮಾಲಯದಂತಹ ವಿಘ್ನವನ್ನು ನನ್ನ ಕೈಯಿಂದಲೇ ನಾನು ತಂದುಕೊಂಡಂತೆ ಆಗಲಿಕ್ಕಿಲ್ಲವೇ?..... ಮೊದಲೇ ನನ್ನ ಆಶಾಮಂದಿರವು ಉಸುಕಿನ ನೆಲಗಟ್ಟಿನ ಮೇಲೆ ಕಟ್ಟಿದ್ದಿರುತ್ತದೆ. ಅದರ ಮೇಲೆ ಸಿಡಿಲು ಬೀಳದೆ ಹೋಗಲಿಕ್ಕಿಲ್ಲ. ವಾರುಣಿಯಲ್ಲಿ ಲಾವಣ್ಯವಿದೆ. ಅವಳಪ್ಪನ ಬಳಿಯಲ್ಲಿ ಹಣವಿದೆ. ನನ್ನಲ್ಲಿ ಅಂತಹದೇನಿದೆ? ಇದ್ದುದೊಂದು ಒಡಕು ಹಣೆ; ಇನ್ನೊಂದು ಪ್ರೀತಿಗೋಸ್ಕರ ನೀರಡಿಸಿದ ಹೃದಯ; ಆದರೆ ಒಮ್ಮೆ ವಚನಕೊಟ್ಟ ಮೇಲೆ ಯೋಚಿಸಿ ಪ್ರಯೋಜನವೇನು?... ಆದದ್ದಾಗಲಿಯೆಂದು ಸಮಾಧಾನ ಮಾಡಿಕೊಂಡು ಸುಧೆಯು ಸಮುದ್ರದ ಸುಂದರ ನೋಟವನ್ನು ನೋಡಹತ್ತಿದಳು. ಉಸುಕಿನಲ್ಲಿ ನಿಂತಾಗ

ಪರ್ವತದಷ್ಟು ದೊಡ್ಡದಾಗಿ ಕಾಣುವ ತೆರೆಗಳು ಈಗ ತರಂಗಗಳಂತೆ ಭಾಸಿಸುತ್ತಿದ್ದವು. ವ್ಯವಹಾರದೊಳಗಿನ ಸಂಕಟಗಳೂ ಪ್ರೇಮದ ಉಚ್ಚ ಭೂಮಿಕೆಯ ಮೇಲೆ ನಿಂತಾಗ ಕ್ಷುದ್ರವೆನಿಸುತ್ತವೆಂಬುದರ ದೃಷ್ಟಾಂತ ಅವಳಿಗೆ ಈಗ ಗೊತ್ತಾಯಿತು.

ಶಿವಮಂದಿರದ ಮಂಟಪದೊಳಗೆ ಕಾಲಿಡುವಷ್ಟರಲ್ಲಿ "ಪ್ರಭೋ, ಕ್ಷಮಿಸು. ನನಗೆ ಸತ್ಯಮಾರ್ಗದಿಂದ ನಡೆಯುವದಕ್ಕೆ ಧೈರ್ಯ ನೀಡು." ಎಂದು ಗದ್ಗದಿತರಾಗಿ ಸದಾನಂದ ಸ್ವಾಮಿಯವರು ದೇವರಿಗೆ ಸಾಷ್ಟಾಂಗವಾಗಿ ನಮಸ್ಕರಿಸಿದರು. ಆ ಮೇಲೆ ಎದ್ದು ಪೌಳಿಯ ಕಡೆಗೆ ಹೋಗುವಷ್ಟರಲ್ಲಿ ಕಾಲಸಪ್ಪಳ ಕೇಳಿ ಬಂದುದರಿಂದ ತಿರುಗಿ ನೋಡಿದರು.

"ಬನ್ನಿ, ಹುಡುಗಿಯರೆ ಈ ಮಟಮಟ ಮಧ್ಯಾಹ್ನದಲ್ಲಿ ದೇವರಿಗೆ ಬಂದಿರಾ?"

"ಮಹಾರಾಜರ ದರ್ಶನಕ್ಕಾಗಿ ಬಂದೆವು" ಎಂದು ವಾರುಣಿಯು ನುಡಿದಳು.

"ನನ್ನ ದರ್ಶನಕ್ಕಾಗಿ ಬಂದಿರಾ? ದರ್ಶನ ಪಡೆಯುವಂತಹದೇನೂ ನನ್ನಲ್ಲಿಲ್ಲ. ಬನ್ನಿ, ಕುಳಿತುಕೊಳ್ಳಿ. ಸುಧಾಕರನನ್ನು ನೀನು ನೋಡಿರುವೆಯಾ?"

"ಅವರು ನನಗೆ ದಿನಾಲು ಕಲಿಸುವದಕ್ಕೆ ಬರುತ್ತಾರೆ."

"ಅಂತಹ ಗುರು ಸಿಕ್ಕ ಮೇಲೆ ನನ್ನಂತಹ ಸನ್ಯಾಸಿಯ ದರ್ಶನದಿಂದೇನು ಲಾಭ? ಅಮೃತವನ್ನು ಬಿಟ್ಟು ಸಮುದ್ರದ ನೀರನ್ನು ಯಾರೂ ಕುಡಿಯಲು ಹೋಗುವದಿಲ್ಲ."

ವಾರುಣಿಗೆ ಏನು ಮಾತಾಡಬೇಕೆಂದೇ ತೋಚಲಿಲ್ಲ. ಕೊನೆಗೆ ಕಾಲ್ಬೆರಳಿನಿಂದ ನೆಲದ ಮೇಲೆ ಗೀರುತ್ತಾ "ಒಳಿತಾಗಬೇಕೆಂಬ ಇಚ್ಛೆ ಇದ್ದರೆ ಮನುಷ್ಯನು ಏನು ಮಾಡಬೇಕು?"

''ಲೋಭ ಬಿಡಬೇಕು. ತನಗಿಂತ ಹೆಚ್ಚು ದುಃಖವಲ್ಲಿದ್ದವರನ್ನು ಪ್ರೀತಿಸಬೇಕು. ಹಾಗೂ ಅವರ ದುಃಖ ಕಡಿಮೆಯಾಗುವಂತೆ ಯತ್ನಿಸಬೇಕು "

''ಹಿರಿಯರಿಗೆ ಇದು ಸೇರದಿದ್ದರೆ.........''

''ಸೇರದಿದ್ದರೆ ಅವರ ಹೇಳಿಕೆಯನ್ನು ಮನ್ನಿಸಬಾರದು. ಜಗತ್ತಿನಲ್ಲಿ ಸುವಿಚಾರವನ್ನು ಪ್ರತಿಬಂಧಿಸಲು ಅನೇಕ ಸಂಗತಿಗಳಿವೆ. ಲೋಭ, ರೂಢಿ, ಸಮಾಜದ ಭಯ, ಕುಲಗೌರವ.........''

"ಜಗತ್ತಿನ ಈ ಅಂತಪಾರವಿಲ್ಲದ ಸಂತೆಯಲ್ಲಿ ತನ್ನ ನಿಜವಾದ ಮನೆಯ ಮಾರ್ಗ ನನ್ನಂತಹ ಹುಡುಗಿಗೆ ಹೇಗೆ ಗೊತ್ತಾಗಬೇಕು?"

"ಇಂತಹ ಗೊಂದಲದಿಂದ ಪಾರಾಗಲು ದೇವರು ಹುಟ್ಟುವಾಗಲೇ ಬುದ್ಧಿಯನ್ನು ದಯಪಾಲಿಸಿರುತ್ತಾನೆ. ಆದರೆ ಕಣ್ಮುಚ್ಚಿ ನಡೆದು ಹೊಂಡದಲ್ಲಿ ಬೀಳುತ್ತೇವೆ. ಹೊಂಡದಲ್ಲಿ ಬಿದ್ದಮೇಲೂ ಅನೇಕರು ಕಣ್ದೆರೆಯುವದಿಲ್ಲ. ಯಾವನೊಬ್ಬ ತೆಗೆದರೂ ಸೂರ್ಯಪ್ರಕಾಶದಿಂದ ಆತನ ಕಣ್ಣು ಕುಕ್ಕಿಹೋಗುತ್ತಿದೆ. ಹುಡುಗಿಯರೇ, ನೀವು ಯಾವಾಗಲೂ ಒಂದು ಚಿತ್ರವನ್ನು ಕಣ್ಣೆದುರು ಇಟ್ಟುಕೊಳ್ಳಿ. ಅಂದರೆ ನಿಮಗೆ ನಿಜವಾದ ಸುಖವು ಲಭಿಸುವದು."

"ಯಾವ ಚಿತ್ರವದು?"

"ಕಾಂಚನಮೃಗದ ಚಿತ್ರ. ರಾವಣನು ಸೀತಾಹರಣ ಮಾಡುವುದಕ್ಕಾಗಿ ಮಾರೀಚನೆಂಬ ರಾಕ್ಷಸನನ್ನು ಕಾಂಚನಮೃಗದ ರೂಪದಿಂದ ಕಳಿಸಿದನು. ಸೀತೆಯು ಅದಕ್ಕೆ ಮರುಳಾಗಿ ರಾಮನನ್ನು ಕಳಕೊಂಡಳು. ಅದರಂತೆ ನಮ್ಮೆಲ್ಲರ ಆಯುಷ್ಯದಲ್ಲಿಯೂ ಹೀಗೇ ಮೋಸವಾಗುತ್ತಿದೆ. ಚಿಕ್ಕಂದಿನಲ್ಲಿ ಆಲಸ್ಯವು ಹುಚ್ಚು ಹಿಡಿಸುತ್ತಿದೆ. ತಾರುಣ್ಯದಲ್ಲಿ ರೂಪ, ರೊಕ್ಕದ ಹುಚ್ಚು. ಮುಪ್ಪಿನಲ್ಲಿ ಕಲ್ಲಿನ ದೇವರನ್ನು ಸಂತೈಸಿದರೆ ತಾವು ಮಾಡಿದ ಪಾಪ ಪರಿಹಾರವಾಯಿತೆಂದು ಭಾವಿಸುತ್ತಾರೆ. ಆದರೆ ನಿಜವಾದ ಸುಖ ಆಲಸ್ಯದಲ್ಲಿರದೆ ದುಡಿಮೆಯಿಂದ ಸಂಪಾದಿಸಿದ ವಿದ್ಯೆಯಲ್ಲಿದೆ,

ಗಂಡ ಹೆಂಡಿರ ರೂಪದಲ್ಲಿರದೆ ಒಬ್ಬರೊಬ್ಬರ ಯೋಗಕ್ಷೇಮಕ್ಕಾಗಿ ತಳಮಳಿಸುವ ಹೃದಯದಲ್ಲಿದೆ; ರೊಕ್ಕದಲ್ಲಿರದೆ ಪರೋಪಕಾರದಲ್ಲಿದೆ; ಕಲ್ಲಿನ ದೇವರ ಪೂಜೆಯಲ್ಲಿರದೆ ಮನುಷ್ಯರ ಸೇವೆ ಮಾಡುವುದರಲ್ಲಿದೆ."

ಸುಧಾ-ವಾರುಣಿಯರು ಸ್ವಾಮಿಯವರಿಂದ ಕಾಂಚನಮೃಗದ ಆದರ್ಶವನ್ನು ಕೇಳಿ ಅವರ ಅಂತರ್ಜ್ಞಾನದ ಬಗ್ಗೆ ಚಕಿತರಾದರು.

ಆ ಮೇಲೆ ಸ್ವಾಮಿಯವರು ನಿರೋಪ ಕೊಟ್ಟರು. ಸುಧಾವಾರುಣಿಯರಿಬ್ಬರೂ ನಮಸ್ಕರಿಸಿದ ಬಳಿಕ "ದೇವರು ನಿಮಗೆ ಕಲ್ಯಾಣಮಾಡಲಿ" ಎಂದು ಆಶೀರ್ವದಿಸಿ ಪೌಳಿಯೊಳಗೆ ಹೋಗಿಬಿಟ್ಟರು.

ವಾರುಣಿಯ ಆಗ್ರಹದಿಂದ ಸ್ವಾಮಿಯವರ ದರ್ಶನಕ್ಕೆ ಬಂದುದು ಒಳಿತಾಯಿತೆಂದು ಸುಧೆಯು ತಿಳಿದುಕೊಂಡಳು. ಅವರಿಗೆ ತನ್ನ ಮೇಲೆ ಕೋಪವಿಲ್ಲವೆಂದು ನಂಬಿಗೆಯಾಯಿತು. ಆದರೆ ತನ್ನ ಪುನರ್ವಿವಾಹದ ಬಗ್ಗೆ ಜಾನಕಮ್ಮನವರ ಮನವನ್ನು ಎಷ್ಟರಮಟ್ಟಿಗೆ ಒಲಿಸಬಹುದೆಂಬುದು ಸಮಸ್ಯೆಯಾಗಿಯೇ ಉಳಿದಿತ್ತು. ಏನೇ ಆದರೂ ಅವರಿಗೆ ತಮ್ಮ ಗುರುತು ತೋರಿಸುವ ಇಚ್ಛೆಯಿಲ್ಲವೆಂಬುದು ಸ್ಪಷ್ಟವಾಯಿತು. ಆದ್ದರಿಂದ ಸುಧಾಕರನ ಹೇಳಿಕೆಯಂತೆ ಅವರ ಗುಟ್ಟನ್ನು ಒಡೆಯದಿರುವುದೇ ಒಳಿತು. ಸಾವಂತವಾಡಿಯಲ್ಲಿದ್ದೂ ಹೆಂಡತಿಮಕ್ಕಳನ್ನು ಭೆಟ್ಟಿಯಾಗಿಲ್ಲ. ಇದರ ಮೇಲಿಂದ ಹೀಗೆ ಗುಪ್ತವಾಗಿರುವುದರಲ್ಲಿ ಅವರ ದೇನೋ ಉದ್ದೇಶವಿರಬೇಕು. ಆ ಉದ್ದೇಶ ನಮಗೆ ಗೊತ್ತಾಗದಿದ್ದರೂ ನಾನು ಅದರ ವಿರುದ್ಧ ಏಕೆ ಹೋಗಬೇಕು? ತನ್ನ ಮಾವನವರು ನನಗೆ ಗುರುತು ಹತ್ತಗೊಡದಿದ್ದರೂ ಅವರ ಕಣ್ಣೊಳಗಿನ ಮೂಕ ಮಮತೆಯು ಅತ್ತೆಯ ಕಠೋರವಾಕ್ಯ-ಭಾವನೆ-ನಿರ್ಲಕ್ಷತನಕ್ಕಿಂತ ನೂರು ಪಟ್ಟು ಒಳಿತು.

ಸ್ವಾಮಿಯವರ ಅಂತರ್ಜ್ಞಾನ, ಕಾಳಿಯ ಕಾಂಚನಮೃಗದ ಚಿತ್ರ ಇವುಗಳ ಬಗ್ಗೆ ಯೋಚಿಸುತ್ತ ವಾರುಣಿಯು ಸುಧಾಕರನ ಮನೆಗೆ ತಿರುಗಿ ಬಂದಳು. ಸುಧಾಕರನ ಕೋಣೆಯಲ್ಲಿ ಕಾಳಿಯ ಚಿತ್ರ ಹಾಗೂ ಅವನು ತೆಗೆದ ಕಾಂಚನಮೃಗದ ಚಿತ್ರವನ್ನು ನೋಡಿದಳು.

ಆ ಬಿಸಿಲಲ್ಲಿ ಅವರಿಬ್ಬರೂ ದಿನ್ನೆ ಹತ್ತಿ ಇಳಿದು ದಣಿದದ್ದರಿಂದ ಸುಧಾಕರನ ಕೋಣೆಯಲ್ಲಿಯೇ ಚಾಪೆ ಹಾಸಿ ಬಿದ್ದುಕೊಂಡರು. ಅರೆಕ್ಷಣ ದಲ್ಲಿಯೇ ಅವರಿಗೆ ನಿದ್ದೆಹತ್ತಿತು.

ಒಂದೊಂದುವರೆ ತಾಸಿನ ಮೇಲೆ ಅವರನ್ನೆಬ್ಬಿಸಲು ಜಾನಕಮ್ಮ ಬಂದಳು. ಅವರು ಮಲಗಿದ ರೀತಿಯನ್ನು ಕಂಡು ಅವರನ್ನೆಬ್ಬಿಸುವ ಬದಲು ವಿಚಾರದಲ್ಲಿ ಮೈಮರೆತಳು. ಇಬ್ಬರೂ ಒಂದೇ ವಯಸ್ಸಿನವರು. ಇಬ್ಬರ ರೂಪೂ ಚನ್ನಾಗಿವೆ. ವಾರುಣಿಯ ಮೈಮೇಲೆ ಆಭರಣಗಳಿದ್ದು ದರಿಂದ ಅವಳು ಅರಳಿದ ಲತೆಯಂತೆ ಭಾಸಿಸುತ್ತಿದ್ದಳು. ಆದರೆ ಅಲಂ ಕಾರವಿಲ್ಲದ ಸುಧೆಯಲ್ಲಿಯೂ ನವಪಲ್ಲವಿಗಳಿಂದ ಮಂಡಿತವಾದ ಬಳ್ಳಿ ಯ ಮೋಹಕತೆ ಇತ್ತು. ತಾರಕಾರಾಜವಿರಾಜಿತ ಅಂಬರ ಸುಂದರ ವೆಂಬುದರಲ್ಲಿ ಸಂದೇಹವಿಲ್ಲ. ಅದರಂತೆ ಒಂದು ತಾರೆಯೂ ಇಲ್ಲದ ನಸುನೀಲಿಯ ಅಂಬರವೂ ದರ್ಶನೀಯವೇ. ಇಬ್ಬರೂ ಒಬ್ಬರೊಬ್ಬರ ಹತ್ತಿರದಲ್ಲಿಯೇ ಮಲಗಿದ್ದರು. ಆ ಎರಡು ಜೀವಗಳ ತುಲನೆ ಮಾಡು ತ್ತಿರುವಾಗ ಜಾನಕಮ್ಮನಿಗೆ ಕಣ್ಣಿನಲ್ಲಿ ನೀರೂರಿತು. ಸುಧೆಯು ವಾರು ಣಿಗಿಂತ ಪರಹಿತಕ್ಕೆ ಒಂದು ಕಾಲಮೇಲೆ ಸಿದ್ಧಳಿದ್ದರೂ ಅವಳ ಕಾಲು ಗುಣ ಕೆಟ್ಟದ್ದು; ವಾರುಣಿಗಿಂತಲೂ ಅವಳ ಹಸ್ತ ಸ್ಪರ್ಶದಲ್ಲಿ ಮಮತೆ ಯಿದ್ದರೂ ಅವಳ ಜನ್ಮ ಅಣ್ಣ ಇಲ್ಲವೆ ಮೈದುನರ ಮನೆಯ ಪಾತ್ರೆ ತಿಕ್ಕು ವುದರಲ್ಲಿಯೇ ಕಳೆದು ಹೋಗುವದು; ಸುಧೆಯ ಹೃದಯ ವಾರುಣಿಗಿಂತ ಕೋಮಲವೆಂಬುದು ಜಾನಕಮ್ಮನಿಗೆ ಗೊತ್ತು. ಆದರೆ ಅವಳ ಹಣೆಯ ಲ್ಲಿ ವಾರುಣಿಗಿದ್ದಂತೆ ಕುಂಕುಮವಿದ್ದಿಲ್ಲ. ಕುಂಕುಮವಿಲ್ಲದ ಮಾತ್ರಕ್ಕೆ ಹೃದಯದ ಬೆಲೆಯಷ್ಟು ಕಡಿಮೆಯಾಗಬೇಕೇ? ಕುಂಕುಮವು ಬಾಹ್ಯ ಶೃಂಗಾರ; ಪ್ರೇಮಳತನ ಹೃದಯಕ್ಕೆ ಭೂಷಣ. ಜೀವಕ್ಕಿಂತ ದೇಹದ ಬೆಲೆ ಅಧಿಕವಲ್ಲ. ಸುಧೆಯ ಹಣೆಯ ಮೇಲೆ ಕುಂಕುಮ ಎಷ್ಟೋ ಚನ್ನಾಗಿ ತೋರಬಹುದು. ಅಳಿಸಿಹೋದ ಕುಂಕುಮ ಹಚ್ಚಲು ಬರುತ್ತಿ ದೆ. ಆದರೆ.... ...ಆದರೆ.......ವಿಧವೆಯ ಪುನರ್ವಿವಾಹ ಪಾಪವಲ್ಲವೇ?

ಪಾಪ-ಪುಣ್ಯ; ಸ್ವರ್ಗ-ನರಕ; ಒಳಿತು-ಹಾಳು! ಮದುವೆ ಮಾಡುವದೇನೂ ಪಾಪವಲ್ಲ, ನಾಳೆ ವಾರುಣಿಯ ಮದುವೆಯಾದರೆ

ಅದು ಪಾಪವೇ? ಆದರೆ ಸುಧೆಯ ಮದುವೆ ಮಾತ್ರ ಪಾಪ! ಅದೇಕೆ? ವಾರುಣಿಗಿಂತ ಸುಧೆಯಲ್ಲಿ ಅಂತಹದಾವ ದೋಷವಿದೆಯೆಂದು ಅವಳಿಗೆ ಮದುವೆಯ ಸುಖ ಸಿಗಬಾರದು? ಗಂಡಸರು ಒಂದು ಹೆಂಡತಿ ಸಾಯಲು ಕೂಡಲೇ ಇನ್ನೊಂದು ಹೆಂಡತಿ ಮಾಡಿಕೊಳ್ಳುತ್ತಾರೆ. ಇನ್ನೊಂದೂ ಸತ್ತರೆ ಮಗದೊಂದನ್ನು ಕಟ್ಟಿಕೊಳ್ಳಲಿಕ್ಕೂ ಸಿದ್ಧರೇ! ಇಂತಹ ಗಂಡಸರಿಗೆ ಯಾರೂ ಪಾಪಿಯೆಂದು ಹೇಳುವದಿಲ್ಲ. ಆದರೆ ಮದುವೆಯೆಂದರೆ ಮಕ್ಕಳಾಟವೆಂಬುದರ ಹೊರತು ಸಂಸಾರದ ಯಾವ ಹೆಚ್ಚಿನ ಅನುಭವವೂ ಇಲ್ಲದ ತನ್ನ ಮದುವೆಯೆಂದರೆ ಒಂದು ಕನಸೆಂದು ಭಾವಿಸುವಂತಹ- ಹದಿನೆಂಟು-ಇಪ್ಪತ್ತು ವಯಸ್ಸಿನ ವಿಧವೆಯು ಪುನರ್ವಿವಾಹ ಮಾಡಿಕೊಂಡರೆ ಅದರಲ್ಲಾವ ಪಾಪವಿದೆ? ಜಗತ್ತು ಪಕ್ಷಪಾತಿಯಿದ್ದರೂ ದೇವರು ನಿಜವಾಗಿಯೂ ಹಾಗಿಲ್ಲ. ಎರಡನೇ ಸಂಬಂಧದ ಹೆಂಡತಿಯು ಜಗತ್ತಿನ ಕಣ್ಣಿಗೆ ಬೀಳುವದಿಲ್ಲ. ಆದರೆ ಬಾಲವಿಧವೆಯ ಪುನರ್ವಿವಾಹಕ್ಕೆ ಮಾತ್ರ ಎಲ್ಲ ಜನರೂ ಗಂಟಲು ಒಣಗುವವರೆಗೆ ಧರ್ಮ ಮುಳುಗಿತೆಂದು ಒದರಿಕೊಳ್ಳುವರು.

ಸುಧಾ ಮತ್ತು ವಾರುಣಿಯರ ಹಣೆಯನ್ನು ಜಾನಕಮ್ಮ ಲಕ್ಷಪೂರ್ವಕವಾಗಿ ನಿರೀಕ್ಷಿಸಿದರು. ಒಂದೇ ಒಂದು ಕುಂಕುಮತಿಲಕದ ವ್ಯತ್ಯಾಸ. ಆದರೆ ಅಷ್ಟರಿಂದಲೇ ಅವರಿಬ್ಬರ ಹಣೆ ಬರಹಗಳಲ್ಲಿ ಭೂಮ್ಯಾಕಾಶದಷ್ಟು ಅಂತರವಿತ್ತು. ವಾರುಣಿಗೆ ತನ್ನ ಕಣ್ಣೀರೊರಸುವದಕ್ಕೆ ಹಕ್ಕಿನ ಕೈ ಸಿಗಬಹುದು. ಆದರೆ ಸುಧೆಯ ಕಣ್ಣಿಗೆ ಸೀರೆಯ ನಿರ್ಜೀವ ಸೆರಗಿನ ಹೊರತು ಇನ್ನಾರ ಸ್ಪರ್ಶವೂ ಆಗಲಿಕ್ಕಿಲ್ಲ. ಏನಾದರೊಂದು ಒಳ್ಳೆ ಕೆಲಸ ಮಾಡಲು ಗಲ್ಲದ ಮೇಲೆ ಮೆಲ್ಲನೆ ಬಡೆದು ಸಂತೋಷಗೊಳಿಸುವವರು ವಾರುಣಿಗೆ ಲಭಿಸಬಹುದು; ಆದರೆ ಸುಧೆಯ ಸಂತೋಷವನ್ನು ಇಮ್ಮಡಿಸುವವರು ಯಾರೂ ಇಲ್ಲ. ಅವಳಿಗೆ ತನ್ನ ದುಃಖಶಮನಕ್ಕೆ ಚಿಂತಾಕ್ರಾಂತ ಮನಸ್ಸಿನಿಂದ ಅಂಗೈಮೇಲೆ ಗಲ್ಲವಿಟ್ಟುಕೊಂಡು ಕುಳಿತುಕೊಳ್ಳುವದೊಂದೇ ಮಾರ್ಗ ಈವಾಗ ತೆರೆದದ್ದಿದೆ. ನಾಳೆ ವಾರುಣಿಯ ಟೊಂಕದಮೇಲೆ ಕೂಸೊಂದು ಆಡಹತ್ತಬಹುದು; ಸುಧೆಗೆ ಮಾತ್ರ ತನ್ನ ಟೊಂಕದ ಮೇಲೆ ಒಂದೊಂದು ಮಣ ಭಾರದ ಕೊಡ ಹೊತ್ತು

ಅಣ್ಣ ಇಲ್ಲವೆ ಮೈದುನನ ಮನೆಯಲ್ಲಿ ನೀರು ತುಂಬುವುದರ ಹೊರತು ಇನ್ನಾವ ಗತಿಯೂ ಇಲ್ಲ. ವಾರುಣಿಯ ಮನೆಯಲ್ಲಿ ವೃಂದಾವನ ಉದ್ಭವಿಸಬಹುದು. ಆದರೆ ಸುಧೆಯ ಆಯುಷ್ಯ ಮಾತ್ರ ಸ್ಮಶಾನದಂತೆಯೇ ಇರಬಹುದು. ವೈಮೇಲಿನ ಮಗುವಿಗೆ ಒಂದೇಸವನೆ ಮುದ್ದು ಕೊಡುತ್ತಿರುವಾಗ ವಾರುಣಿಗೆ ಸ್ವರ್ಗವೂ ತುಚ್ಛವೆನಿಸಬಹುದು. ಆದರೆ ಸುಧೆಗೆ ಮಾತ್ರ ನಿಷ್ಪ್ರೇಮ ನರಕವೇ ಗತಿ!

ಎರಡು ಹಣೆಗಳಲ್ಲಿ ಎಂತಹ ಭಯಂಕರ ವ್ಯತ್ಯಾಸ! ಸುಧೆಯ ಹೃದಯ ಒಳ್ಳೆಯದಿದೆ. ಅಂದ ಮೇಲೆ ಹಣೆಯೂ ಏಕೆ ಒಳಿತಿರಬಾರದು? ಜಾನಕಮ್ಮನಿಗೆ ತನ್ನ ವಿವಾಹಿತ ಜೀವನದ ನೆನಪಾಯಿತು. "ತನ್ನ ಪತಿಯು ಕಾರಖಾನೆಯ ಕೆಲಸಕ್ಕಾಗಿ ಹೋಗುವದಿದ್ದರೆ ತಾನು ರಾತ್ರಿಯೆಲ್ಲ ಎಚ್ಚರವಾಗಿಯೇ ಇರುತ್ತಿದ್ದೆ. ಮಾತನಾಡುತ್ತಿರುವಾಗ ಎಷ್ಟು ಬೇಗನೇ ಬೆಳಗಾಯಿತೆಂದು ನನಗೆ ಅನಿಸುತ್ತಿತ್ತು. ಅವರು ಹೊರಟರೆಂದರೆ ತನಗೂ ಮನೆ ಮಠ ಬಿಟ್ಟು ಜೊತೆಗೇ ಹೋಗಬೇಕೆಂಬ ವಿಚಾರ ಬರುತ್ತಿತ್ತು. ಇಷ್ಟೆಲ್ಲ ಆನಂದ– ಸಹವಾಸದ ಸುಖ ಮತ್ತು ವಿರಹದಲ್ಲಿಯ ಕಾತರ– ಲಭಿಸಬೇಕೆಂದೇ ಅಲ್ಲವೇ ಜನ್ಮಕ್ಕೆ ಬರುವುದು! ಆದರೆ ಸುಧೆಯ ಹಣೆಯಲ್ಲಿ ತಿಲಮಾತ್ರವೂ ಈ ಆನಂದ ಬರೆದಿರಲಿಲ್ಲ."

"ಪತ್ನಿಯ ಸುಖವಿಲ್ಲದಿದ್ದರೆ ಮಾತೃಪದದ ಸುಖವಾದರೂ ಸುಧೆಗೆ ಬೇಕಾಗಿತ್ತು. ಇತರರಷ್ಟು ಬೇಗನೇ ಮಕ್ಕಳಾಗಲಿಲ್ಲವೆಂದು ತುಂಬಾ ಕೆಡುಕೆನಿಸುತ್ತಿತ್ತು. ಚಂದ್ರನಿಗೋಸ್ಕರ ಹಟಹಿಡಿದು ಅಳುತ್ತಿರುವ ರಾಮನನ್ನು ಸಮಾಧಾನ ಪಡಿಸುವ ಕೌಸಲ್ಯೆ ಅಥವಾ ದೇವರ ಮುಂದಿನ ನೈವೇದ್ಯ ತಿನ್ನುವ ಕೃಷ್ಣನನ್ನು ದೊಡ್ಡ ಕಣ್ಣು ಮಾಡಿ ಬೆದರಿಸುವ ಯಶೋದೆ–ಇವರ ಚಿತ್ರವನ್ನು ಕಂಡಾಗ ಈರ್ಷೆಯುಂಟಾಗುತ್ತಿತ್ತು. ಜಾತ್ರೆಯಲ್ಲಿ 'ಆಟಿಗೆ ಕೊಂಡುಕೊಳ್ಳುವುದು–ಮನೆಯಲ್ಲಿ ಅವುಗಳನ್ನು ನೋಡುತ್ತ ಮನಸ್ಸಿನಲ್ಲಿ ತಳಮಳಗೊಳ್ಳುವುದು– ಹೀಗೆ ಪ್ರತಿವರ್ಷವೂ ನಡೆಯುತ್ತಿತ್ತು. ಇವನಿಗೆ ಹುಡುಗ ಹುಟ್ಟಿದ–ಅವನಿಗೆ ಹುಡುಗಿ ಹುಟ್ಟಿದಳು." "ಎಂಬ ಸುದ್ದಿ ಕೇಳಲು ಮನಸ್ಸು ಕುಗ್ಗಿ ಹೋಗುತ್ತಿತ್ತು."

ಕಾಲು ಕಲ್ಲಿಗೆ ಎಡವುತ್ತಿದೆ. ಆದರೆ ಈ ದುಷ್ಪತನಸಕ್ಕೋಸ್ಕರ ಅವುಗಳನ್ನು ನಿಂದಿಸಿದರಾದೀತೇ? ಇಲ್ಲವೆ ನೀವು ಹೇಳಿದ ಪರೋಪಕಾರಗಳಿಗಾಗಿ ಸ್ತುತಿಸಿದರಾದೀತೇ? ಅವುಗಳಿಗೆ ಎರಡೂ ಒಂದೇ. ಮನುಷ್ಯನಲ್ಲಿ ಬುದ್ಧಿ ಇರುತ್ತದೆ........ಭಾವನೆಯಿರುತ್ತದೆ."

"ಒಳ್ಳೇದು, ಈಗ ಮನುಷ್ಯರ ಸಂಬಂಧವಾಗಿಯೇ ಮಾತನಾಡೋಣ. ನಮ್ಮ ಜನ್ಮ ನಮ್ಮ ಕೈಯ್ಯಲ್ಲಿಲ್ಲವಾದರೂ ನಮ್ಮ ಕರ್ಮ ನಮ್ಮ ಕೈಯ್ಯಲ್ಲಿದೆ. ಇಷ್ಟಕ್ಕಾಗಿಯೆ ಮನುಷ್ಯನಿಗೆ ಬುದ್ಧಿ ಮತ್ತು ಭಾವನೆಗಳನ್ನು ಕೊಟ್ಟಿರುತ್ತದೆ. ಲಕ್ಷಗಟ್ಟಲೆ ಜನರಲ್ಲಿ ವಿರಕ್ತನೊಬ್ಬನು ದೊರೆಯಬಹುದು. ಉಳಿದವರೆಲ್ಲ ಸಂಸಾರಿಕರಿರುತ್ತಾರೆ ಅಂದಮೇಲೆ ಈ ಸಂಸಾರದಲ್ಲಿಯೇ ಅವರು ದೇವರು, ಧರ್ಮ, ಪುಣ್ಯ, ಸುಖಗಳನ್ನು ಶೋಧಿಸಬೇಡವೇ?"

"ಆದರೆ ಸ್ವಾರ್ಥ, ಲೋಭ, ಮತ್ಸರ ಇತ್ಯಾದಿ ದುರ್ಗುಣಗಳಿಂದ ಕೊಳೆತು ಹೋದ ಜಗತ್ತಿನಿಂದ ಅವೆಲ್ಲ ಎಂದೋ ಓಡಿಹೋಗಿರಬೇಕು.

"ಓಡಿಹೋದ ಮಾತ್ರಕ್ಕೆ ಆ ಧರ್ಮ ಹೋಗುವದೆಲ್ಲಿ? ಮನುಷ್ಯರಿದ್ದಲ್ಲಿಯೆ ಅವು ಇರತಕ್ಕದ್ದು. ಮಗೂ, ನಿರಾಶೆಯಿಂದ ಹೀಗೆ ಕುಗ್ಗಬೇಡ. ಬಿರುಗಾಳಿಯಲ್ಲಿ ನೌಕೆಯು ಒಡೆದು ಹೋದರೂ ದೀಪಸ್ತಂಭ ಅಚಲವಾಗಿರುತ್ತದೆ. ಅದರತ್ತ ದೃಷ್ಟಿಯಿಟ್ಟೇ ಪ್ರತಿಯೊಬ್ಬನೂ ಈಸುತ್ತ ಹೋಗಿ ದಂಡೆ ಮುಟ್ಟಬೇಕು. ಸ್ವಾರ್ಥತ್ಯಾಗದ ಅಭೇದ್ಯ ಬಂಡೆಯ ಮೇಲ್ಕೂ ಉಚ್ಚ ಧ್ಯೇಯದ ದೀಪವನ್ನು ನೀನು ಎಂದೋ ಹಚ್ಚಿರುವಿ. ಅಂದಮೇಲೆ ಸುಮ್ಮನೆ ಏಕೆ ನಿರಾಸೆಯ ಸಮುದ್ರದಲ್ಲಿ ಮುಳುಗೇಳುತ್ತಿರುವಿ?"

ಸುಧಾಕರನ ಧೈರ್ಯ ಸೂರ್ಯನನ್ನು ಮುಸುಕಿಕೊಂಡ ಮೋಡಗಳು ಮೆಲ್ಲಮೆಲ್ಲನೆ ಕರಗಹತ್ತಿದವು. ಅವನಿಗೆ ಮನುಷ್ಯ ಜನ್ಮದ ಮತ್ತು ವಿಶ್ವದ ಸಮಸ್ಯೆಯನ್ನು ಪೂರ್ಣವಾಗಿ ಬಿಡಿಸುವದಕ್ಕೆ ಸಮಯವೂ ಇದ್ದಿಲ್ಲ ಸಾಮರ್ಥ್ಯವೂ ಇದ್ದಿಲ್ಲ. ಪುಷ್ಪದಂತೆ ಸುಂದರ ಬಣ್ಣವನ್ನು ಚೆಲ್ಲುತ್ತ, ಸತ್ಯದ ಸುಗಂಧ ಬೀರುತ್ತ ಇರುವುದೇ ಮನುಷ್ಯನ ಜೀವಿತ

ದ ಉದ್ದೇಶವೆಂದು ಆವನಿಗೆ ಖಚಿತವಾಗಿತ್ತು. ಸಾಲೆಯ ಕಟು ಅನುಭವ ದಿಂದ ಅವನ ಮನಸ್ಸಿನ ಮೇಲೆ ನಿರಾಸೆಯ ಮೋಡ ಮುಸುಕಿದ್ದೇನೋ ನಿಜ. ಆದರೆ ಸ್ವಾಮಿಯವರ ಪ್ರೋತ್ಸಾಹಕ ಸಂಭಾಷಣೆಯಿಂದ ಅವು ನಿಮಿಷಾರ್ಧದಲ್ಲಿಯೇ ಮಾಯವಾಗಿಹೋದವು ಜಯಗ್ರಾಮದ ಸಾಲೆಯ ಲ್ಲಿ ಸುಧಾರಣೆ ಮಾಡುವುದಕ್ಕಾಗಿ ಶಕ್ಯವಿದ್ದಷ್ಟು ಹೆಣಗಬೇಕೆಂಬ—ಹಾಗೂ ಅದಕ್ಕೆ ವಿರೋಧವುಂಟಾದಲ್ಲಿ ಸ್ವತಂತ್ರವಾಗಿ ಶಿಕ್ಷಣಕಾರ್ಯ ಮಾಡ ಬೇಕೆಂಬ ತನ್ನ ಮನೋಭಿಲಾಷೆಯನ್ನು ಸ್ವಾಮಿಯವರಿಗೆ ಶ್ರುತಪಡಿಸಿ ದನು. ಅವನ ಮಾತಿನಲ್ಲಿಯ ನಿರಾಸೆಯ ಛಾಯೆಯು ಮಾಯವಾದುದ ನ್ನು ಕಂಡು ಸ್ವಾಮಿಯವರಿಗೂ ಅತ್ಯಾನಂದವಾಯಿತು.

ಇಷ್ಟಾದನಂತರ ಅವರಲ್ಲಿ ಇನ್ನೂ ಎಷ್ಟೋ ಮಾತುಕತೆಗಳಾದವು. ಸ್ವಾಮಿಯವರು ಊಟಕ್ಕೆ ಬಾರದ್ದರಿಂದ ಜಾನಕಮ್ಮ ಬೇಸರುಗೊಂಡ ದ್ದು—ಸ್ವಾಮಿಯವರ ದರ್ಶನಕ್ಕೆ ಬರಬೇಕೆಂಬ ಆಕೆಯ ತೀವ್ರ ಅಭಿಲಾ ಷೆ-ಗಂಗಾಧರನು ಸಂಬಳದಿಂದ ಒಂದು ಪೈಯನ್ನೂ ಮನೆಗೆ ಕೊಡದ್ದ ರಿಂದ ಮನೆಯವರು ಪಡುವ ಯಾತನೆ-ಇವೆಲ್ಲವುಗಳನ್ನು ಸವಿಸ್ತರ ವಾಗಿ ತಿಳಿಸಿದನು. ಸ್ವಾಮಿಯವರು ಸಹ ಸುಧಾ ಮತ್ತು ವಾರುಣಿಯರು ಬಂದಾಗ ಕಾಂಚನಮೃಗದ ಆದರ್ಶ ಹೇಳಿದ್ದು, ತಾನು ಹೊರಗೆ ಹೋಗದಿದ್ದರೂ ಇಲ್ಲಿಯ ಗಾಬೀತ ಜನರು ತಾವಾಗಿಯೇ ಹಾಲು ಹಣ್ಣು ತಂದುಕೊಡುತ್ತಿದ್ದುದು-ಇವೇ ಮೊದಲಾದ ಸಂಗತಿಗಳನ್ನು ಒಂದುಳಿಯದಂತೆ ಹೇಳಿದರು

ಸುಧಾಕರನು ಹೋಗಲು ಎದ್ದಾಗ ಅವನ ಭುಜದ ಮೇಲೆ ಕೈಯ್ಯಿ ಟ್ಟು ಮಂದಹಾಸದಿಂದ ನೋಡಿ "ಮಗೂ, ತನ್ನ ಹೃದಯವನ್ನು ತನ್ನೊಡನೆ ಬಿಚ್ಚಿಡುವದು ಸಹ ಕಠಿಣವಿರುತ್ತದೆ. ಆದ್ದರಿಂದ ನಾನೊಂ ದು ಪ್ರಶ್ನೆ ಕೇಳಲೇ?"

ಸುಧೆಯ ಸಂಬಂಧವಾಗಿಯೇ ಸ್ವಾಮಿಯವರ ಪ್ರಶ್ನೆಯಿರಬಹು ದೆಂದು ಭಾವಿಸಿ ಸುಧಾಕರನ ಎದೆ ಬಡಿದುಕೊಳ್ಳಲಾರಂಭಿಸಿತು ಸ್ವಾಮಿಯವರ ಕಣ್ಣಿನೆಡೆಗೆ ನೋಡಲು ಅವನಿಗೆ ಧೈರ್ಯವಾಗಲಿಲ್ಲ.

"ಮಗೂ, ನೀನು ನನ್ನ ಮಗನಂತಿರುವಿ. ನನ್ನ ಪ್ರಶ್ನೆಗೆ ಮನಃಪೂರ್ವಕ ಉತ್ತರಕೊಡುವಿಯಾ?"

"ಹುಂ"

"ಸುಧೆಯು ನಿನ್ನ ನಾಲಿಗೆ ಮೇಲೆ ಇದ್ದಂತೆ ನಿನ್ನ ಹೃದಯದಲ್ಲಿಯೂ ಇರುವವಳಲ್ಲವೇ? ಇದರಲ್ಲಿ ನಾಚಿಕೆ ಪಡುವಂತಹುದೇನಿದೆ? ಸುಧೆಯು ನಿನ್ನ ಹೃದಯದಲ್ಲಿ ಇದ್ದೇ ಇದ್ದಾಳೆ. ಅವಳನ್ನಷ್ಟು ನಿನ್ನ ಕೈಯ್ಯಲ್ಲಿ ಕೊಟ್ಟುಬಿಟ್ಟರಾಯಿತು."

"ಆದರೆ ಕೈ ಮತ್ತು ಹೃದಯಗಳೊಳಗೆ ಎಷ್ಟೋ ಸಾರೆ ಎರಡು ಧ್ರುವಗಳಷ್ಟು ಅಂತರವಿರುತ್ತದೆ."

"ಆ ಅಂತರವನ್ನು ಹೃದಯವೆ ಹರಿಯಬಲ್ಲದು."

"ನನ್ನ ಮತ್ತು ಸುಧೆಯ ಎಲ್ಲ ಆಸೆಗಳು ಅಮ್ಮನನ್ನು ಅವಲಂಬಿಸಿವೆ."

"ನಿನ್ನ ಅಮ್ಮನ ಮನಸ್ಸನ್ನು ಒಲಿಸಲು ನನ್ನಿಂದ ಸಾಧ್ಯವಿದ್ದಷ್ಟು ಯತ್ನಿಸುವೆ."

ಯಾವ ಗಾಳಿಯಿಂದ ತನ್ನ ನಾವೆಯು ದಂಡೆಯನ್ನು ಬಿಟ್ಟು ಬಹುದೂರ ಹೋಗಬಹುದೆಂಬ ಭಯವೆನಿಸಿತ್ತೋ ಆ ಗಾಳಿಯೇ ಆ ನೌಕೆಯನ್ನು ದಂಡೆಗೆ ಮುಟ್ಟಿಸಿ ಬಿಟ್ಟರೆ ಆಗುವ ಆನಂದದ ಅನುಭವ ಈಗ ಸುಧಾಕರನಿಗೆ ಬಂದಿತು. ಆ ಆನಂದದ ಭರದಲ್ಲಿ ತಾನು ಮನೆಗೆ ಮುಟ್ಟಿದ್ದೇ ಆತನಿಗೆ ಗೊತ್ತಾಗಲಿಲ್ಲ. ರಾತ್ರಿ ಹಾಸಿಗೆಯ ಮೇಲೆ ಎಷ್ಟೋ ಹೊತ್ತಿನ ತನಕ ಎಚ್ಚರಾಗಿಯೇ ಇದ್ದನು ಆನಂದದಿಂದ ಹಲವಾರು ವಿಷಯಗಳನ್ನು ಮನದಲ್ಲಿಯೇ ತೂಗಿ ನೋಡುತ್ತಿದ್ದನು.

ಮರುದಿನ ಬೆಳಗ್ಗೆ ಸುಧೆಯು ಪುಸ್ತಕ ತಾರದೆ ಸುಧಾಕರನ ಮನೆಗೆ ಬಂದಳು. ರಾತ್ರಿ ಅತ್ತಿಗೆಗೆ ಗಂಡು ಕೂಸು ಹುಟ್ಟಿತ್ತು. ಮನೆಗೆಲಸದ ಮೂಲಕ ಕಲಿಯಲು ಬರಲಿಕ್ಕಾಗುವದಿಲ್ಲವೆಂದು ಹೇಳಲು ಬಂದಿದ್ದ

ಳು. ಅವಳು ಮರಳುವಾಗ ಸುಧಾಕರನು "ಬಹುಮಾನ ಏನು ಕೊಡುವಿ?" ಎಂದು ಕೇಳಿದನು.

"ಏತಕ್ಕೆ?"

"ಸಂತೋಷದ ಸುದ್ದಿಯೊಂದು ಹೇಳುವವನಿದ್ದೇನೆ."

"ಅದರಿಂದ ಯಾರಿಗೆ ಸಂತೋಷವಾದೀತು?"

"ನಿನಗೂ-ನನಗೂ."

"ಹಾಗಾದರೆ ಬಹುಮಾನದ ಅರ್ಧ ಪಾಲು ನೀನೇ ಕೊಡಬೇಕು."

"ಸ್ವಾಮಿಯವರು ಅಮ್ಮನಿಗೆ ಹೇಳುವವರಿದ್ದಾರೆ. ಆ ಮೇಲೆ........ ಓಹೋ, ಬೆಳಗಾಗುವದರೊಳಗೇ ಗುಲಾಬಿ ಅರಳಿತಲ್ಲ!"

× × + ×

ವಾರುಣಿಗೆ ಕಲಿಸಲು ಹೋದಾಗ ಸುಧಾಕರನು ಗಂಗಾಧರನ ಬದಲು ಜಗನ್ನಾಥನನ್ನು ನಿಯಮಿಸುವ ಬಗ್ಗೆ ರಾವಸಾಹೇಬರ ಬಳಿ ಮಾತೆತ್ತಿದನು. ಗಂಗಾಧರನು ಮನೆಯವರ ಬಗ್ಗೆ ಏನೊಂದೂ ಕಾಳಜಿ ತೆಗೆದುಕೊಳ್ಳುವದಿಲ್ಲವೆಂಬುದರ ಹೊರತು ಸುಧಾಕರನು ಇನ್ನೇನೂ ದೂರಲಿಲ್ಲ. ಗಂಗಾಧರನಂತಹ ಹೆಂಡಗುಡುಕ ನಿಷ್ಕಾಳಜಿ ಮನುಷ್ಯ ರಾವಸಾಹೇಬರಿಗೂ ಬೇಡವೇ ಆಗಿದ್ದ. ಆದರೆ ಸುಧಾಕರನು ವಾರುಣಿಗೆ ಕಲಿಸಲು ಬರಬೇಕೆಂದು ಮಾತ್ರ ಗಂಗಾಧರನನ್ನು ಇಂದಿನ ತನಕ ಕೆಲಸದಿಂದ ತೆಗೆದು ಹಾಕಿದ್ದಿಲ್ಲ. ಸುಧಾಕರನು ತಾನಾಗಿಯೇ ಸ್ಪಷ್ಟ ಹೇಳಿದುದರಿಂದ ಸುಧಾಕರನು ಮನೆಗೆ ಹೋದದ್ದೇ ತಡ, ಇಪ್ಪತ್ತು ನಾಲ್ಕು ತಾಸುಗಳೊಳಗಾಗಿ ಬಿಟ್ಟು ಹೋಗಬೇಕೆಂದು ಗಂಗಾಧರನಿಗೆ ರಾವಸಾಹೇಬರು ನೋಟೀಸು ಕೊಟ್ಟು ಬಿಟ್ಟರು. ಇದಕ್ಕೆಲ್ಲ ಸುಧಾಕರನೇ ಕಾರಣನೆಂದು ಗಂಗಾಧರನು ಭಾವಿಸಿ, ಸೇಡು ತೀರಿಸುವ ವಿಚಾರ ನಡೆಯಿಸಹತ್ತಿದನು.

ಇಂದು ಕಲಿಯುವಾಗ ವಾರುಣಿಯ ಮನಸ್ಸು ಸ್ಥಿರವಾಗಿದ್ದಿಲ್ಲವೆಂಬುದು ಸುಧಾಕರನ ಗಮನಕ್ಕೆ ಬಾರದೇ ಹೋಗಲಿಲ್ಲ. ಆಕೆ ಸ್ವಾಮಿಯವರಿಗೆ ಒಮ್ಮೆಲೇ ಭೆಟ್ಟಿಯಾಗಿ 'ಒಳಿತಾಗುವುದಕ್ಕೆ ಏನು ಮಾಡಬೇಕು?'

ಎಂದು ಕೇಳಿದ್ದನ್ನು ಸ್ವಾಮಿಯವರಿಂದ ತಿಳಿದಿತ್ತು. ಆದರಿಂದ ಯಾವುದೋ ಒಂದು ವಿಷಯ ಅವಳ ಮನಸ್ಸನ್ನು ಕೊರೆಯುತ್ತಿದೆಯೆಂಬುದು ನಿಶ್ಚಯ. ಹಾಗಾದರೆ ಆ ವಿಷಯವಾವುದು? ಆಕೆ ದಿನಾಲು ಮಧುಕರನ ಜೊತೆಯಲ್ಲಿ ಅಡ್ಡಾಡಲು ಹೋಗುತ್ತಾಳೆ. ಅಂದಮೇಲೆ ಆ ಕವಿಯ ಬಲೆಯಲ್ಲಿ ಬಿದ್ದಿರಲಿಕ್ಕಿಲ್ಲವಷ್ಟೇ! ಇಂದಿನ ಶ್ರೀಮಂತನ ಹುಡುಗಿ ನಾಳೆ ಇನ್ನೊಬ್ಬ ಶ್ರೀಮಂತನ ಹೆಂಡತಿಯಾಗಬಹುದು. ಆಗ ಇವಳ ಕೈಯಿಂದ ಬಡವರ ಹಿತಸಾಧಿಸಲೆಂದು ಕಲಿಸುವಾಗೆಲ್ಲ ಬಡವರ ಕರುಣ ಕಥೆಯನ್ನು ಮುಂದಿಡುತ್ತಿದ್ದೆ, ಓದಲು ಒಳ್ಳೆಯ ಪುಸ್ತಕ ಕೊಟ್ಟೆ, ಒಳ್ಳೊಳ್ಳೆಯ ಚರಿತ್ರೆಗಳನ್ನು ಹೇಳಿದೆ. ಆದರೆ ಈ ಪ್ರಯತ್ನವೆಲ್ಲ ಮಧುಕರನಂತಹ ಪಾತರಗಿತ್ತಿಯನ್ನು ಆರಿಸುವುದರಲ್ಲಿಯೇ ಪರ್ಯವಸಾನವಾಗಬೇಕೇ? ಅವಳ ಮನೆಯಲ್ಲಿ ದಿನವೆಲ್ಲ ವಿಷದ ಅಖಂಡ ಝರಿಯು ಹರಿಯುತ್ತಿರುತ್ತದೆ. ಅಂದಬಳಿಕ ಅದರ ಪರಿಣಾಮವಾಗದೆ ಹೋದೀತೇ? 'ಮರಕ್ಕೆ ತಕ್ಕಂತೆ ಫಲ' ಎಂದು ಯೋಚಿಸುತ್ತ ದಾದಾಸಾಹೇಬರ ಮನೆಗೆ ಬಂದು ಸಾಲೆಯ ಸುಧಾರಣೆಯ ಹಾದಿಯನ್ನು ಯೋಚಿಸಲು ಇಂದು ಶಿಕ್ಷಕರೆಲ್ಲ ಒಂದೆಡೆ ಕೂಡಬೇಕೆಂದು ಸೂಚಿಸಿದನು. "ತಮ್ಮಲ್ಲೇ ಆಗಬಹುದು. ಜೊತೆಗೆ ಹುಡುಗ ಹುಟ್ಟಿದ ಚಹಾ ಕೊಡಲಿಕ್ಕೂ ಅನುಕೂಲ." ಎಂದು ಸೂಚಿಸಿದರು. ಸುಧಾಕರನು ಹೋಗಲು ಎದ್ದ. ದಾದಾಸಾಹೇಬರು ಆಗ್ರಹದಿಂದ ಕೂಡಿಸಿಕೊಂಡು ವರ್ತಮಾನ ಪತ್ರದಲ್ಲಿಯ ತಾಜಾಸುದ್ದಿ ಹೇಳಿದ್ದಲ್ಲದೆ, ಒಳಗಿನಿಂದ ಒಂದು ಪುಸ್ತಕ ತಂದು ಕೊಟ್ಟರು.

ಅದು ೨೦-೪೦ ಪುಟದ ಮಧುಕರನ ಕವಿತೆಯ ಪುಸ್ತಕ. ಅದರ ಪರಿವಿಡಿಯಲ್ಲಿದ್ದ ಪದ್ಯಗಳೆಲ್ಲ ಸುಧಾಕರನು ಮೊದಲು ಕೇಳಿದ್ದೇ ಆಗಿದ್ದವು.

"ನಾನು ಹಿಂದೊಮ್ಮೆ ಈ ಕವನಗಳನ್ನು ಓದಿದ್ದೇನೆ. ಕವಿತೆಯೇನೋ ಚನ್ನಾಗಿದೆ. ಆದರೆ ......"

"ಆದರೇನು?"

"ಇದರಲ್ಲಿ ವಿಧವೆಯೆಂಬ ಕವನವಿದೆ. ಕಾವ್ಯದಲ್ಲಿ ವಿಧವೆಗೋಸ್ಕರ ಎದೆ ಬಡೆದುಕೊಳ್ಳುವುದು ಹಾಗೂ ಮನೆಯಲ್ಲಿದ್ದ ವಿಧವೆ ಅತ್ತಿಗೆಯನ್ನು.... ....."

ಅದೇ ಹೊತ್ತಿಗೆ ಮಧುಕರನು ಕೋಣೆಯಲ್ಲಿ ಬಂದನು. ಒಳಗೆ ನಡೆದ ಸಂಭಾಷಣೆಯನ್ನೆಲ್ಲ ಕೇಳಿದ್ದರಿಂದ ಸುಧಾಕರನೆಡೆಗೆ ಕೋಪದಿಂದ ನೋಡುತ್ತ ಕೈಯ್ಯಲ್ಲಿದ್ದ ಪುಸ್ತಕಗಳನ್ನು ಮೇಜಿನ ಮೇಲೆ ಒಗೆದನು.

"ಅರ್ಪಣಾ ಪತ್ರಿಕೆಯೆಷ್ಟು ಚನ್ನಾಗಿದೆ! ವಾರುಣಿಯ ಫೋಟೋ ಸಹ ಚನ್ನಾಗಿ ಬಂದಿದೆ"

"ಜಗನ್ನಾಥನು ವಾರುಣಿಗೆ ಪತ್ರ ಬರೆದನೆಂದು ನೀವು ಅವನನ್ನು ಸಾಲೆಯಿಂದ ಹೊರದಬ್ಬಿದಿರಿ."

"ಆದರೆ ಇದಕ್ಕೆ ಅದಕ್ಕೆ ಏನು ಸಂಬಂಧ?"

"ಈ ಅರ್ಪಣಾ ಪತ್ರಿಕೆಯು ಅದೇ ಮಾದರಿಯದಲ್ಲವೇ? 'ನನ್ನ ಪ್ರಿಯ ವಿದ್ಯಾರ್ಥಿನಿ ಕು. ವಾರುಣಿಯ ಅಧರದ್ವಯದಲ್ಲಿ ಈ ಮಧುಬಿಂದು ಸದೈವ ವಾಸಿಸಲಿ' ಎಂದು ಅರ್ಪಣೆ ಬರೆದದ್ದಾಗಿದೆ. ಅಧರದ್ವಯವಂತೆ, ಮಧುಬಿಂದುವಂತೆ; ಏಳನೇ ವರ್ಗದಲ್ಲಿ ಒಂದು ವಿಷಯವೂ ಇಲ್ಲದೆ ವಾರುಣಿಯು ಇವರ ಪ್ರಿಯ ವಿದ್ಯಾರ್ಥಿನಿಯಾಗಿಬಿಟ್ಟಳು."

"ನೀವು ಮನೆಯಲ್ಲಿ ಹಾಗೂ ಸಾಲೆಯಲ್ಲಿ ಕಲಿಸುತ್ತೀರೆಂದ ಮಾತ್ರಕ್ಕೆ ವಾರುಣಿಯು ಸಂಪೂರ್ಣ ನಿಮ್ಮವಳೇ ಆಗಿಬಿಟ್ಟಳೇ?" ಮಧುಕರನು ಅವಡುಗಚ್ಚುತ್ತ ನುಡಿದನು.

ಸುಧಾಕರನಿಗೆ ಸಿಟ್ಟು ಬಂದಿತ್ತಾದರೂ ಅಂತರಂಗದಲ್ಲಿ ವಡವಾನಲವನ್ನಿಟ್ಟುಕೊಳ್ಳುವ ಸಾಗರದಂತೆ ತನ್ನ ಸಿಟ್ಟನ್ನು ತಾನೇ ನುಂಗಿಕೊಂಡನು.

"ವಾರುಣಿಯು ಸಂಪೂರ್ಣ ನಿಮ್ಮವಳಾಗಿ ಬಿಟ್ಟಳೇ? ಎಂದು ಮಧುಕರನು ಕೇಳಿದ್ದರಿಂದ ಇವರಲ್ಲಿ ಏನಾದರೂ ಸಂಬಂಧವಿರಬೇಕೆಂದು ಸುಧಾಕರನು ಊಹಿಸಿದನು. ವಾರುಣಿಯು ಛಾಪಿಸಲಿಕ್ಕೆ ತನ್ನ

ಫೋಟೋ ಕೊಟ್ಟದ್ದರಿಂದ ಅವನ ಸಂದೇಹ ಇನ್ನಷ್ಟು ಬಲಗೊಂಡಿತು. ತಾನು ಕಲಿಸಿದ್ದರ ಪರಿಣಾಮವು ಎಳ್ಳಷ್ಟೂ ಆಗದಿದ್ದ ಮೇಲೆ ತಾನು ಕಲಿಸಲಿಕ್ಕೆ ಹೋಗುವುದು ನಿರರ್ಥಕವೆಂದು ನಿರ್ಧರಿಸಿದನು. ಮಧುಕರನು ವಾರುಣಿಯನ್ನುದ್ದೇಶಿಸಿ ಬರೆದ ಅರ್ಪಣ ಪತ್ರಿಕೆಯ ಬಗ್ಗೆ ಅವನಿಗೆ ಸಿಟ್ಟು ಬಂದಷ್ಟೇ ನಗುವೂ ಬಂದಿತು. ಮಧುಬಿಂದುವಿನ ಒಂದು ಪ್ರತಿಯನ್ನು ಕೊಂಡು 'ನಮ್ಮ ಸಾಲೆಯ ಶಿಕ್ಷಕರ ಮನೋವೃತ್ತಿಯ ರೀತಿ' ಎಂದು ಅದನ್ನು ಕಾಳಿಯ ವಿಳಾಸಕ್ಕೆ ಕಳುಹಿಸಿಬಿಟ್ಟನು.

ಸಂಜೆ ಎಲ್ಲ ಶಿಕ್ಷಕರೂ ದಾದಾಸಾಹೇಬರ ಮನೆಯಲ್ಲಿ ಕೂಡಿದರು. ಸುಧಾಕರನು ಸುಧಾರಣೆಗಳ ಒಂದು ಯೋಜನೆಯನ್ನು ನಿಶ್ಚಯಿಸಿ ಮಾತನಾಡಲು ಪ್ರಾರಂಭಿಸುವಷ್ಟರಲ್ಲಿ ಒಂದು ಮೋಟರು ಬಾಗಿಲಲ್ಲಿ ಬಂದು ನಿಂತಿತು. ಅದರೊಳಗಿಂದ ಖಾನಾಪುರದ ಪುಂಡಂಭಟ್ಟರು, ವಾಲಾವಲಿಯ ಶಾಸ್ತ್ರಿಗಳು ಮತ್ತು ಸುಂದರಾಬಾಯಿ ಇಷ್ಟು ಮಂದಿ ಹೊರಬಿದ್ದರು. ದಾದಾಸಾಹೇಬರು ಅವರನ್ನು ಸ್ವಾಗತಿಸಲು ಮುಂದಾದರು. ಸುಧಾಕರನನ್ನು ನೋಡಿದೊಡನೆಯೇ ಪುಂಡಂಭಟ್ಟರು "ಈಕಡೆಯಲ್ಲಿ ನೀವು ಪ್ರೊಫೇಶ್ವರ? ಅಂದು ಬೆಳಗಾವಿಯಲ್ಲಿ ವೇದಪುರುಷನನ್ನು ತಪ್ಪಿಸಿಕೊಂಡಿರಿಂದು ಇಲ್ಲಿ ಮಾತ್ರ ಸಾಧ್ಯವಿಲ್ಲ. ಇವರು ವಾಲಾವಲಿಯಲ್ಲಿಯ ಶಾಸ್ತ್ರಿಗಳು. ಕೊಂಕಣ ಪ್ರಾಂತದಲ್ಲಿಯ ವಿದ್ವದ್ರತ್ನ ಇದ್ದಾರಿವರು. ಹೇಳಿ ಶಾಸ್ತ್ರಿಗಳೇ, ವೇದ ಎಷ್ಟು ದೊಡ್ಡದು? ಪುರಾಣ ಎಂತಹದು? ಶಾಸ್ತ್ರ ಎಷ್ಟು ಅಗಾಧವಿದೆ? ಅಗ್ನಿನಾರಾಯಣನ ವರಪ್ರದಾನದಿಂದ ಮೊದಲು ಹೇಗೆ ಮಕ್ಕಳು ಹುಟ್ಟುತ್ತಿದ್ದರು? ಇವೆಲ್ಲ ಹೇಳಿ ......."

ಸುಧಾಕರನ ಹಣೆಯ ಮೇಲಿನ ನಿರಿಗೆ ನೋಡಿ ಪುಂಡಂಭಟ್ರು ತಮ್ಮ ಪುರಾಣ ನಿಲ್ಲಿಸಿ ಬಿಟ್ಟರು. "ತನ್ನ ತಂಗಿಯ ಅತ್ತೆಯವರು ಸುದ್ದಿ ಮುಟ್ಟಿದ್ದೇ ತಡ; ಬಂದೇ ಬಿಟ್ಟಿದ್ದಾರೆ. ಋಣಾನುಬಂಧ ಹೀಗಿರಬೇಕು. ಅವರನ್ನು ಉಪಚರಿಸುವದಿದೆ' ಎಂದು ಒಳಗೆ ಹೋದರು. ಚಹಾ ಹೊಟ್ಟೆಯಲ್ಲಿ ಬಿದ್ದೊಡನೆಯೇ ಉಳಿದ ಶಿಕ್ಷಕರು ಕಾಲಿಗೆ ಅಪ್ಪಣೆ ಕೊಟ್ಟರು.

ಸುಧಾಕರನೂ ಹೊರಬಿದ್ದನು. ರಸ್ತೆಯ ಮೇಲೆ ಹೋಗಿ ತಿರುಗುವಷ್ಟರಲ್ಲಿ ಯಾರೋ ಒಬ್ಬನು ಹಾದು ಹೋದದ್ದು ಕಂಡಿತು. ಅವನು ಯಾರೆಂಬುದನ್ನು ನೋಡಲು ತನ್ನ ದೃಷ್ಟಿ ತಿರುಗಿಸಿದಾಗ ಗಂಗಾಧರನು ದಾದಾಸಾಹೇಬರ ಮನೆಯ ಮೆಟ್ಟಿಲನ್ನು ಹತ್ತುತ್ತಿದ್ದನು.

● ● ● ● ●

ಗಂಗಾಧರನು ಮಧುಕರನ ಕೋಣೆಯಲ್ಲಿ ಭಂದಾಗ "ಏನಯ್ಯಾ?" ಎಂದು ಮಧುಕರನು ಕೇಳಿದನು. ಗಂಗಾಧರನು ಮಾತನಾಡದೆ ಕಿಸೆಯಿಂದ ಒಂದು ಉಂಗುರ ತೆಗೆದುಕೊಟ್ಟನು. ಅದರ ಮೇಲೆ "ಸುಧಾಕರ" ಎಂದು ಹೆಸರಿದ್ದುದರಿಂದ ಹೇಗೆ ಬಂದಿತೆಂದು ಪ್ರಶ್ನ ಸೂಚಕ ದೃಷ್ಟಿಯಿಂದ ಒಂದೆರಡು ಸಲ ಗಂಗಾಧರನನ್ನು ನೋಡಿದನು. ಆದರೆ ಗಂಗಾಧರನು ಹೇಳಲು ಹಿಂಜರಿಯುತ್ತಾನೆಂದು ಅನಿಸಿದ್ದರಿಂದ ತೆರೆದ ಬಾಗಲು ಮುಚ್ಚಿದೊಡನೆ ಗಂಗಾಧರನ ಬಾಯಿ ಒಡೆಯಿತು.

ಯಮುವಿನ ತಲೆಗಿಂಬಿಗಿದ್ದ ಉಂಗುರವನ್ನು ಗಂಗಾಧರನು ಎತ್ತಿ ಹಾಕಲು ಎರಡು ಕಾರಣಗಳಿದ್ದವು. ಒಂದು ಲೋಭ, ಇನ್ನೊಂದು ಸಂಶಯ. ಲಕ್ಷ್ಮಿಯು ಮಧ್ಯಪಿಯನ್ನು ಬಿಟ್ಟು ಹೋಗುತ್ತಿದ್ದರೂ ಅವನಿಗೆ ಅವಳನ್ನು ಬಿಡುವುದಕ್ಕೆ ಮನಸ್ಸಿರುವದಿಲ್ಲ. ಆದುದರಿಂದ ಹಿಂದು ಮುಂದಿನ ವಿಚಾರವಿಲ್ಲದೆ ಅದನ್ನು ಕಿಸೆಯಲ್ಲಿ ಹಾಕಿಕೊಂಡನು. ಅದನ್ನು ಸುಧಾಕರನೇ ಕೊಟ್ಟಿರಬೇಕೆಂದು ಅರ್ಧಮರ್ಧ ಸಂದೇಹ ಅವನ ಮನಸ್ಸನ್ನು ಆಕ್ರಮಿಸಿತ್ತು. ಏಕಾಂತದಲ್ಲಿ ಹೋಗಿ ನೋಡಿದಾಗ ಅದರ ಮೇಲಿದ್ದ ಹೆಸರು ಅವನ ಸಂದೇಹವನ್ನು ಧೃಡಪಡಿಸಿತು. ಆದರೆ ಹೆಸರಿದ್ದುದರಿಂದ ಆ ಉಂಗುರವನ್ನು ಮಾರಲು ಶಕ್ಯವಾಗಲಿಲ್ಲ. ಯಮೂಳ ತಾಯಿಯು ಉಂಗುರ ಕಳೆದು ಹೋಯಿತೆಂದು ತುಂಬಾ ಗೊಂದಲವೆಬ್ಬಿಸಿದ್ದಳು. ಆದರೆ ಗಂಗಾಧರನು ಸುಮ್ಮನೆ ಕೇಳಿದರೂ ಕೇಳಿಸದಂತೆ ಕುಳಿತು ಬಿಟ್ಟಿದ್ದಳು. ಸುಧಾಕರನಾದರೂ ಆ ಉಂಗುರವನ್ನು ಕೊಡಲು ಯಾರಿಗೂ ಒತ್ತಾಯ ಮಾಡದ್ದರಿಂದ ಆ ಪ್ರಕರಣ ಅಷ್ಟಕ್ಕೇ ಶಾಂತವಾಯಿತು.

ಗಂಗಾಧರನು ಮಾತ್ರ ಈ ಉಂಗುರವನ್ನು ಏನು ಮಾಡಬೇಕೆಂಬ ವಿಚಾರದಲ್ಲಿ ಬಿದ್ದನು. ಟಾಯಿನ್ಸ ತಂದು ಕೊಡುವ ನೆವದಿಂದ ಪ್ರತಿ ದಿನ ಅವನಿಗೆ ಮಧುಕರನ ಭೆಟ್ಟಿಯಾಗುತ್ತಿತ್ತು. ಒಮ್ಮೊಮ್ಮೆ ಅವನಿಗೆ ನಾಲ್ಕಿಂಟಾಣೆ ಕೊಟ್ಟು-ಅವನೊಡನೆ ಸರಳತನದಿಂದ ನಡೆದು ಮಧುಕರನು ಅವನ ವಿಶ್ವಾಸ ಸಂಪಾದಿಸಿಕೊಂಡಿದ್ದ. ಆದರಿಂದ ಅವನು ಮೇಲಿಂದ ಮೇಲೆ ಸುಧಾಕರ-ವಾರುಣಿಯರ ಬಗ್ಗೆ ಸಂದೇಹ ದೃಷ್ಟಿಯಿಂದ ಪ್ರಶ್ನೆ ಕೇಳುತ್ತಿದ್ದ. ಗಂಗಾಧರನೇನೂ ಈ ಪ್ರಶ್ನೆಗಳ ಗರ್ಭಿತಾರ್ಥ ತಿಳಿಯದವನು ಮೂರ್ಖನಿದ್ದಿಲ್ಲ. ಸುಧಾಕರ-ವಾರುಣಿಯರ ಬಗ್ಗೆ ಮಧುಕರನ ಮನಸ್ಸಿನಲ್ಲಿ ಏನೋ ಸಂಶಯ ಹುಟ್ಟಿದೆಯೆಂಬುದನ್ನು ಅವನು ಆಗಲೇ ಗೊತ್ತು ಹಚ್ಚಿದ್ದನು. ಆದರೆ ಮಧುಕರನಿಗೆ ಯೋಗ್ಯವಾದ ಪುರಾವೆ ಅವನ ಕೈಗೆ ಎಂದೂ ಸಿಕ್ಕಲಿಲ್ಲ. ಸುಧಾಕರನು ಪ್ರತಿನಿತ್ಯ ೧-೧॥ ತಾಸು ಕಲಿಸಿ ಹೋಗುತ್ತಿದ್ದ. ಅವನು ಕಲಿಸುತ್ತಿದ್ದಾಗ ವಾರುಣಿಯ ಕೋಣೆಯ ಬಾಗಿಲು ಸಂಪೂರ್ಣ ತೆರೆದದ್ದೇ ಇರುತ್ತಿತ್ತು. ಇಲ್ಲವಾದರೆ ಈ ವಿಷಯದಲ್ಲಿ ಗಂಗಾಧರನು ಯಾವಾಗಲೋ ಗದ್ದಲವೆಬ್ಬಿಸಿ ಬಿಡುತ್ತಿದ್ದ. ಮಧುಕರನು ಮೇಲಿಂದ ಮೇಲೆ ಸುಧಾಕರ-ವಾರುಣಿಯರ ಬಗ್ಗೆ ಪ್ರಶ್ನೆ ಕೇಳಿದರೂ "ಅವರು ಬರುತ್ತಾರೆ-ಕಲಿಸುತ್ತಾರೆ-ಹೋಗುತ್ತಾರೆ." ಎಂಬ ಉತ್ತರ ಮಾತ್ರ ಸಿಗುತ್ತಿತ್ತು.

ಮನುಷ್ಯನಿಗೆ ಮದ್ಯದ ಅಮಲೇರಿತೆಂದರೆ ಎಲ್ಲವೂ ವಿಕೃತವಾಗಿ ಕಾಣಹತ್ತುತ್ತದೆ. ವಾಲಾವಲಿಯಲ್ಲಿ ಸುಧಾಕರನು ಯಮುವಿನ ಹೆಸರು ಹೇಳಿದೊಡನೆ ಗಂಗಾಧರನ ಮನಸ್ಸಿನಲ್ಲಿ ಮೊದಲು ಸಂಶಯದ ವಿಷಬೀಜ ಬಿತ್ತಲ್ಪಟ್ಟಿತು .ತನ್ನ ಹೆಂಡತಿಯ ಹೆಸರು ಈ ಪರಕೀಯನಿಗೆ ಗೊತ್ತಾಗಿದೆಯೆಂದ ಬಳಿಕ ಇದರಲ್ಲಿ ಏನಾದರೂ ಗುಟ್ಟಿರಬೇಕೆಂದು ಅವನ ಮನಸ್ಸು ಹೇಳಿತು. ಜಯಗಾಂವಕ್ಕೆ ಬಂದ ಮೇಲೆ ಬೇರೆ ಬೇರೆ ಕಾರಣಕ್ಕಾಗಿ ಸುಧಾಕರನು ಯಮುವಿನ ಮನೆಗೆ ಹೋಗಿದ್ದನು ಇದರಿಂದ ಗಂಗಾಧರನ ಸಂದೇಹಾಗ್ನಿಯು ಇನ್ನಷ್ಟು ಪ್ರಜ್ವಲಿಸಿತು. ಸುಧಾಕರನ ಮನೆಯಲ್ಲಿ ತನ್ನ ಹೆಂಡತಿ ಕಸ ಮುಸರೆಯ ಕೆಲಸಕ್ಕೆ ನಿಂತ ಮೇಲಂತೂ ಅವನ ಅಂಗಾಲಿನಲ್ಲಿಯ ಉರಿಯು ತಲೆಗೇರಿಬಿಟ್ಟಿತು. ಆದರೆ

ಪ್ರತಿಸಾರೆಯೂ ಹೊಟ್ಟೆಯ ವ್ಯವಸ್ಥೆ ಮಾಡದೆ ಬೆನ್ನ ಮೇಲೆ ಸ್ವೇಚ್ಛೆಯಿಂದ ಬಡಿಯುವ ಗಂಡನ ಮರ್ಜಿ ಕಾಯುವುದು ಯಮಾಗೆ ಶಕ್ಯವಿದ್ದಿಲ್ಲ. ಅವಳು ಹಡೆಯುವ ತನಕ ಸುಧಾಕರನ ಮನೆಯಲ್ಲಿ ಕೆಲಸ ಮಾಡುವುದನ್ನು ಬಿಡಲಿಲ್ಲ. ಹೆಂಡಗುಡುಕ ಗಂಡನ ಬಾಯಿಂದ ಬೀಳುವ ವಿಷವನ್ನು ತಾನೇ ಕುಡಿದುಬಿಡುತ್ತಿದ್ದಳು. ಇದರಿಂದ ಸುಧಾಕರನಿಗೆ ಇದರ ಸುದ್ದಿ ಹತ್ತಗೊಡಲಿಲ್ಲ. ಈ ರೀತಿ ಗಂಗಾಧರನ ಮನಸ್ಸು ಸುಧಾಕರನ ವಿಷಯದಲ್ಲಿ ಸಂಪೂರ್ಣ ಕೆಟ್ಟು ಹೋಗಿತ್ತು. ಅದರಲ್ಲಿ ಮತ್ತೆ ತನ್ನನ್ನು ಕೆಲಸದಿಂದ ತೆಗೆದು ಹಾಕುವುದಕ್ಕೆ ಸುಧಾಕರನೇ ರಾವಸಾಹೇಬರ ಕಿವಿ ಊದಿರಬೇಕೆಂಬ ಸಂದೇಹ ಭರತಿ ತಂದಿತು. ಅವನ ಕೆರಳಿದ ಮನಸ್ಸಿಗೆ ಕೂಡಲೇ ಸುಧಾಕರನ ಉಂಗುರ, ಸುಧಾಕರ ವಾರುಣಿಯರ ವಿಷಯದಲ್ಲಿ ನಡೆಯುತ್ತಿರುವ ಮಧುಕರನ ವಿಚಾರಣೆ ಕೂಡಿಕೊಂಡಿತು. ಸೇಡಿನ ಈ ಸಾಧನೆಯನ್ನು ಕೈಯ್ಯೊಳಗೆ ಹಿಡಿದುಕೊಂಡೇ ಅವನು ಮಧುಕರನ ಭೆಟ್ಟಿಗೆ ಬಂದಿದ್ದನು.

ಸುಧಾಕರನ ಉಂಗುರ ತನಗೆ ವಾರುಣಿಯ ಮೇಜಿನ ಮೇಲೆ ಸಿಕ್ಕಿತೆಂದು ಅವನು ಮಧುಕರನಿಗೆ ಹೇಳಿದನು. ಪಿತ್ತವೇರಿದ ಮನುಷ್ಯನಿಗೆ ಸೂರ್ಯನು ಸಹ ಪೀತವರ್ಣದವನಾಗಿ ಕಾಣುತ್ತಾನೆ. ಮಧುಕರನ ಮತ್ಸರಕ್ಕೆ ಆ ಉಂಗುರದಲ್ಲಿ ಸುಧಾಕರ-ವಾರುಣಿಯರ ಪಾಪ ಕಾಣಹತ್ತಿತು. ರಾವಸಾಹೇಬರು ಸುಧಾಕರನ ಪ್ರೇರಣೆಯಿಂದ ತನಗೆ ನಾಳೆಯಿಂದ ಕೆಲಸಕ್ಕೆ ಬರಬೇಡವೆಂದು ಹೇಳಿದ್ದಾರೆಂದು ಹೇಳಲು, ಸುಧಾಕರ ವಾರುಣಿಯರಲ್ಲಿ ಏನಾದರೂ ಕಳ್ಳತನವಿರಬೇಕೆಂದೂ ಗಂಗಾಧರನ ಮೂಲಕ ತನಗೆ ತಿಳಿಯಬಹುದೆಂದು ಆತನನ್ನು ತೆಗೆದು ಹಾಕುವಂತೆ ಪ್ರೇರೇಪಿಸಿರಬೇಕೆಂದೂ ಮಧುಕರನು ಊಹಿಸಿದನು. ಆ ಉಂಗುರವನ್ನು ತಿರುಗಿ ವಾರುಣಿಯ ಮೇಜಿನ ಮೇಲೆ ಒಯ್ದಿಡಲು ಗಂಗಾಧರನಿಗೆ ತಿಳಿಸಿ, ರಾವಸಾಹೇಬರ ಕಿವಿಯಲ್ಲಿ ಈ ವಿಷಯವನ್ನು ಹಾಕುವುದಾಗಿಯೂ ಹೇಳಿದನು. ಇನ್ನು ಮುಂದೆ ಸುಧಾಕರ ವಾರುಣಿಯರ ಮೇಲೆ ಚನ್ನಾಗಿ ಕಾವಲಿಟ್ಟರೆ ನಿನಗೆ ಬಹುಮಾನ ಕೊಡುತ್ತೇನೆಂದು ಆಮಿಷ ತೋರಿಸಿದನು. ಅವರಲ್ಲಿ ಯಾರಾದರೂ ಒಬ್ಬರಿಗೊಬ್ಬರು ಪತ್ರ

ಕೊಟ್ಟರೆ ಅದನ್ನು ಮೊದಲು ತನಗೆ ತಂದುಕೊಡೆಂದು ಹೇಳಲಿಕ್ಕೂ ಮರೆಯಲಿಲ್ಲ.

ಗಂಗಾಧರನನ್ನು ಕೆಲಸಕ್ಕೆ ಇಟ್ಟುಕೊಳ್ಳಲು ರಾವಸಾಹೇಬರ ಒಪ್ಪಿಗೆಯಿದ್ದಿಲ್ಲ. ಆದರೆ ಮಧುಕರನು ಸೂಚಕ ಶಬ್ದಗಳಿಂದ ತನ್ನ ಸಂಶಯವನ್ನು ಹೇಳಲು ಅವನನ್ನು ತಿರುಗಿ ಇಟ್ಟುಕೊಳ್ಳಲು ಒಪ್ಪಿದರು.

ರಾತ್ರಿ ಖಿನ್ನಮನಸ್ಸಿನಿಂದ ವಾರುಣಿಯು ಮೇಜಿನ ಮೇಲಿನ ಪುಸ್ತಕಗಳನ್ನು ಸರಿಪಡಿಸಿ ಇಡಹತ್ತಿದಳು. ಮುನ್ನಾದಿನ ಸಂಜೆ ಮಧುಕರನು ಮಧುಬಿಂದುವಿನ ಒಂದು ಪ್ರತಿಯನ್ನು ತುಂಬ ಅಭಿಮಾನದಿಂದ ಅವಳ ಕೈಯಲ್ಲಿ ಕೊಟ್ಟಿದ್ದನು. ಅದರಲ್ಲಿದ್ದ ತನ್ನ ಫೋಟೋ ಸುಧಾಕರನ ಕಣ್ಣಿಗೆ ಬಿದ್ದರೆ ಅವರು ತನ್ನ ಮೇಲೆ ಕೋಪಗೊಳ್ಳುವರೆಂಬ ಭಯದಿಂದ ಮನ್ನಳಾಗಿ ಬಿಟ್ಟಿದ್ದಳು. ರಾತ್ರಿ ಅವಳಿಗೆ ಚೆನ್ನಾಗಿ ನಿದ್ದೆ ಹತ್ತಲಿಲ್ಲ. ಮರುದಿನ ಮುಂಜಾನೆ ಸುಧಾಕರನು ಕಲಿಸಲಿಕ್ಕೆ ಬಂದಾಗ ಆ ಪುಸ್ತಕ ತೋರಿಸಿ ಎಲ್ಲ ಸಂಗತಿ ಹೇಳಿಬಿಡಬೇಕೆಂದು ಅನೇಕ ಸಾರೆ ಯೋಚಿಸಿದರೂ– ತನ್ನ ಫೋಟೋ ನೋಡಿ ಸುಧಾಕರನು ಒಂದಕ್ಷರವನ್ನೂ ಮಾತನಾಡದೆ ಹೋಗಿಬಿಡಬಹುದೆಂಬ ಭಯ ಹುಟ್ಟಿ ಕೊನೆಗೂ ಆ ಪುಸ್ತಕವನ್ನು ತೋರಿಸಲಿಕ್ಕೆ ಆಗಲಿಲ್ಲ ಈ ಚಿಂತೆಯ ಮೂಲಕ ಅವಳಿಗೆ ಅಭ್ಯಾಸದ ಕಡೆಗೆ ಲಕ್ಷವಿದ್ದಿಲ್ಲ. ಶಾಲೆಯಲ್ಲಿ ಸುಧಾಕರನು ಎಂದಿನಂತೆ ಆಕೆಗೆ ಪ್ರಶ್ನೆ ಕೇಳಲಿಲ್ಲ. ಒಂದೆರಡು ಸಲ ಸಿಟ್ಟಿನಿಂದಲೇ ನೋಡಿದ್ದರಿಂದ ಅವಳ ಖಿನ್ನ ಮನಸ್ಸು ಇನ್ನಷ್ಟು ಖಿನ್ನವಾಯಿತು. ನಾಳೆ ಹೇಳಿಬಿಡುತ್ತೇನೆಂದು ಬಯಸಿದರೂ ಅವಳ ಮನದ ಕಳವಳ ಹಿಂಗಲಿಲ್ಲ. ಈ ಬಗೆಯ ಅಸ್ವಸ್ಥ ಮನಸ್ಸಿನಿಂದಲೇ ಪುಸ್ತಕ ಸರಿಪಡಿಸುತ್ತಿರುವಾಗ ತಟ್ಟನೆ ಉಂಗುರ ಕಣ್ಣಿಗೆ ಬಿದ್ದಿತು. ಅದನ್ನೆತ್ತಿ ದೀಪದ ಬೆಳಕಿನಲ್ಲಿ ನೋಡಿದಾಗ "ಸುಧಾಕರ" ಎಂಬ ಹೆಸರು ಹೊಳೆಯಿತು.

"ಸುಧಾಕರರ ಉಂಗುರ ನನ್ನ ಮೇಜಿನ ಮೇಲೆ ಹೇಗೆ ಬಂದಿತು? ಅದನ್ನವರು ಬೆಳಗ್ಗೆ ಬಿಟ್ಟು ಹೋಗಿರಬಹುದೇ? ಈ ಉಂಗುರವನ್ನು ಮರೆತು ಬಿಟ್ಟು ಹೋಗಿರಲಾರರು. ಅವರು ತಾವಾಗಿಯೇ ಇಟ್ಟುಹೋ

ದದ್ದಾದರೆ ಅದರ ಅರ್ಥವೇನು? ದುಷ್ಯಂತನು ಶಕುಂತಲೆಗೆ ಹೀಗೆಯೇ ಒಂದು ಉಂಗುರ ಕೊಟ್ಟಿದ್ದನು. ಅವರ ಮನಸ್ಸಿನಲ್ಲಿ ನನ್ನ ಬಗ್ಗೆ ಪ್ರೇಮ ವುಂಟಾಗಿರಬಹುದೇ? ಹಾಗಿದ್ದರೆ ಇಂದು ಮಧ್ಯಾಹ್ನ ಅವರ ದೃಷ್ಟಿಯಲ್ಲಿ ತೀಕ್ಷ್ಣತೆಯು ಕಂಡು ಬರುತ್ತಿರಲಿಲ್ಲ. ಪ್ರೇಮವು ಪುಷ್ಪವನ್ನು ಅರಳಿಸುತ್ತದೆ, ಆದರೆ ಕೆಂಡವನ್ನು ಪ್ರಜ್ವಲಿಸುವದಿಲ್ಲ."

ಆ ಉಂಗುರದೊಡನೆ ಕೆಲಹೊತ್ತು ಆಡಿ ಬೆರಳಿಗಿಟ್ಟುಕೊಂಡಳು. ಆದರ ಮೇಲಿನ ಹೆಸರನ್ನು ನೋಡಿ ಅವಳ ಮನಸ್ಸಿನಲ್ಲಿ ವಿಚಾರದ ತೆರೆಗಳು ಏಳಹತ್ತಿದವು. "ಸುಧಾಕರನ ಸ್ನೇಹಾಂಕಿತ ಉಂಗುರ ಧರಿಸುವ ಭಾಗ್ಯ ನನ್ನದಾದೀತೇ? ಚಂದ್ರಬಿಂಬವು ಕಾಲಕೂಟ ವಿಷವನ್ನು ಪ್ರಾಶನಮಾಡುವ ಶಿವನ ಹಣೆಯಲ್ಲಿಯೇ ಉಳಿಯುತ್ತದೆ; ಹೊರತು ಇತರ ದೇವತೆಗಳ ಹಣೆಯಲ್ಲಿಲ್ಲ; ಸುಧಾಕರನ ಪತ್ನಿಯಾಗಲು ನಾನು ಅಂತಹ ತಪಶ್ಚರ್ಯವನ್ನೇನು ಮಾಡಿರುವೆ? ನನ್ನ ತಂದೆಯ ಬಳಿಯಲ್ಲಿ ಹಣವಿರುವದಾದರೂ ಸುಧಾಕರನು ಲೋಭಿಯಲ್ಲ. ನನ್ನಲ್ಲಿ ರೂಪವಿದೆಯಾದರೂ ರೂಪಕ್ಕೆ ಮರುಳಾಗುವಷ್ಟು ಸುಧಾಕರನು ಚಂಚಲನಿಲ್ಲ. ಅವರು ಬಡವರಿಗೋಸ್ಕರ ಕಣ್ಣೀರಿಡುತ್ತಾರೆ— ಕಳವಳಗೊಳ್ಳುತ್ತಾರೆ— ಕಷ್ಟಪಡುತ್ತಾರೆ. ನನ್ನಿಂದ ಅಂತಹದೇನು ಘಟಿಸಿರುವದು? ಅವರು ಯಾವುವಿನ ಕಷ್ಟ ಪರಿಸ್ಥಿತಿಯನ್ನು ನನ್ನ ಮುಂದೆ ವರ್ಣಿಸಿದರು. ಆದರೆ ನಾನು ಅದನ್ನು ಕೇಳಿಕೊಂಡು ಕಣ್ಣೀರಿಳಿಸುವುದರ ಹೊರತು ಇನ್ನೇನೂ ಮಾಡಲಿಲ್ಲ. ಬಡವರಿಗೋಸ್ಕರ ಕಣ್ಣೀರಿಳಿಸುವ ದುರ್ಬಲ ಹೆಂಡತಿ ಅವರಿಗೆ ಸೇರಲಿಕ್ಕಿಲ್ಲ; ಅನಾಥರಿಗೋಸ್ಕರ ನೆತ್ತರನ್ನು ಚೆಲ್ಲುವ ವೀರ ಪತ್ನಿಯು ಅವರಿಗೆ ಬೇಕು. ನನ್ನಲ್ಲಿ ಆ ಸಾಮರ್ಥ್ಯ ಇಲ್ಲವೇ ಇಲ್ಲ. ಅವರ ಉಪದೇಶದ ಸೂತ್ರದಿಂದ ನನ್ನ ಮನದ ಗಾಳಿಪಟವು ಗಗನದಲ್ಲಿ ಹಾರಾಡಹತ್ತಿತು. ಆದರೆ ಈ ಗಾಳಿಪಟವನ್ನು ತನ್ನ ಸ್ವಂತದ ರೆಕ್ಕೆಯ ಬಲದಿಂದ ಹಾರಾಡುವ ಗರುಡ ಪಕ್ಷಿಗೆ ಹೋಲಿಸಲು ಬರುವಂತಿಲ್ಲ."

ವಾರುಣಿಯು ಆ ಉಂಗುರವನ್ನು ಮೇಜಿನ ಮೇಲೆ ತೆಗೆದಿಟ್ಟು ತಾನು ಅದನ್ನು ಬೊಟ್ಟಿಗೆ ಹಾಕಿಕೊಂಡದ್ದು ತಪ್ಪಾಯಿತೆಂದೆಣಿಸಿಯೋ

ಏನೋ' ಅವಳು ಅದಕ್ಕೆ ನಮಸ್ಕರಿಸಿದಳು. "ನನ್ನ ಕೈಯೊಳಗಿನ ಉಂಗುರದ ಮೇಲೆ ಸುಧಾಕರನ ಹೆಸರು ಹೊಳೆಯುವದು ಶಕ್ಯವಿಲ್ಲ. ಆದರೆ ಇನ್ನಾರ ಕೈ ಉಂಗುರದ ಮೇಲೆ ಹೊಳೆಯಬಹುದು?" ಎಂದು ಮುಂತಾದ ಮಧುರ ಕಲ್ಪನಾ ತರಂಗಗಳ ಮೇಲೆ ಅವಳ ಹೃದಯ ತೂಗಾಡ ಹತ್ತಿತು. "ನನ್ನ ಉಂಗುರದ ಮೇಲೆ ಯಾರ ಹೆಸರು ಹೊಳೆಯಬಹುದೋ ಅಂಥವರು ಈಗ ಎಲ್ಲಿರುವರು? ಏನು ಮಾಡುತ್ತಿರಬಹುದು? ಮದುವೆಯೆಂದರೆ ಬರೇ ಕಣ್ಣುಮುಚ್ಚಾಣಿಕೆ ಆಟವಲ್ಲವೇ? ನನ್ನ ಜೀವನದೊಡನೆ ಯಾರ ಜೀವ ಏಕರೂಪವಾಗುವದಿದೆಯೋ ಅವರು-ಹಾಗೂ ನಾನು ನಮ್ಮ ನಮ್ಮ ಮನೆಗಳಲ್ಲಿ ಅಡಗಿಕೊಂಡಿರುವೆವು. ಈ ಕಣ್ಣು ಮುಚ್ಚಾಲೆಯಾಟ ಇನ್ನೆಷ್ಟು ದಿನ ನಡೆಯಬಹುದು?"

ಅವಳಿಗೆ ಕಾಳೆಯ ಫೋಟೋ ಮತ್ತು ಅವನು ತೆಗೆದ ಚಿತ್ರದ ನೆನಪಾಯಿತು. "ನಿಜವಾಗಿಯೂ ಆ ಚಿತ್ರ ತುಂಬ ಚೆನ್ನಾಗಿದೆ. ಒಂದು ವೇಳೆ ಅವರೊಡನೆ ನನ್ನ ವಿವಾಹವಾದರೆ ನನ್ನನ್ನು ಎದುರಿಗೆ ಕೂಡ್ರಿಸಿಕೊಂಡು ಚಿತ್ರ ತೆಗೆಯಬಹುದಲ್ಲವೇ? ಚಿತ್ರಕ್ಕೆ ಬೇಕಾದಂತೆ ನಾನು ಕೂತಿರದಿದ್ದರೆ ಅವರು ತಮ್ಮ ಒಂದು ಕೈಯ್ಯನ್ನು ನನ್ನ ತುಟಿಯ ಮೇಲೆ ಇನ್ನೊಂದನ್ನು ಕೂದಲಿನ ಮೇಲೆ ಇಟ್ಟು ನನ್ನ ಮುಖವನ್ನು ಬೇಕಾದಂತೆ ತಿರುಗಿಸಬಹುದು. ಅವರ ಸ್ಪರ್ಶದಿಂದ ನನ್ನ ಗಲ್ಲ ಕೆಂಪಗಾದದ್ದನ್ನು ಕಂಡು 'ನಾಚಿಕೆ ಪಡುವದಕ್ಕೆ ಏನಾಯಿತು?' ಎಂದು ಕೇಳಬಹುದು."

'ಬಣ್ಣವಿಲ್ಲದೆ ಚಿತ್ರ ಚನ್ನಾಗಿ ಕಾಣಬಹುದೆ?' ಎಂದು ಹೇಳುವೆ.

ತಾನು ಇನ್ನೂ ತನಕ ಯಾರೊಡನೆ ಒಂದು ಮಾತನ್ನೂ ಆಡಿರುದಿಲ್ಲವೋ, ಅಂಥವರ ಚಿಂತನೆಯಿಂದ ತನಗೇಕೆ ಇಷ್ಟೊಂದು ಸಂತಸವಾಗಬೇಕೆಂದು ಆಕೆಗೇ ಹೊಳೆಯದಾಯಿತು.

ಕುಮಾರಿಕೆಯು ಇಂತಹ ವಿಚಾರ ಮಾಡುವುದು ಒಳಿತಲ್ಲವೆಂದು ಮೇಜಿನ ಮೇಲಿದ್ದ ಒಂದು ಪುಸ್ತಕ ತೆರೆದು ಓದಹತ್ತಿದಳು ಆದರಲ್ಲಿ

"ಒಲವೆಂಬ ಹೊತ್ತಿಗೆಯನೋದ ಬಯಸುತ ನೀನು
ಬೆಲೆಯೆಷ್ಟು ಎಂದು ಕೇಳುತಿಹೆ ಹುಚ್ಚ.
ದಿನವೆಲ್ಲ ದುಡಿದರೂ, ಹಲಜನುಮ ಕಳೆದರೂ
ನೀ ತೆತ್ತಲಾರೆ ಬರಿ ಅಂಚೆ ವೆಚ್ಚ"

ಎಂದಿತ್ತು. ಆದನ್ನು ಓದಿದೊಡನೆ ಮತ್ತೆ ತನ್ನ ಮದುವೆಯ ವಿಚಾರ ಪ್ರಾರಂಭವಾಯಿತು. ಅವಳು ಸುಧಾಕರ ಮತ್ತು ಕಾಳೆ ಇವರಿಬ್ಬರ ತುಲನೆ ಮಾಡುವುದರಲ್ಲಿ ಮಗ್ನಳಾದಳು. 'ಒಬ್ಬನು ಸೂರ್ಯನಾದರೆ ಇನ್ನೊಬ್ಬ ಚಂದ್ರ. ಒಬ್ಬನ ಪ್ರಕಾಶ ತೇಜಸ್ವಿಯಾದರೆ ಇನ್ನೊಬ್ಬನ ಬೆಳಕು ರಮ್ಯ.' ಅವರ ತುಲನೆ ಮುಗಿದೊಡನೆ ಅವಳು ತನ್ನ ಪರಿಸ್ಥಿತಿಯ ವಿಚಾರಮಾಡಹತ್ತಿದಳು. "ನನ್ನ ಮನದೊಲವನ್ನು ಅರಿಯದೆ ತಂದೆಯವರು ನನ್ನನ್ನು ಯಾವನಾದರೊಬ್ಬ ಇಂಗ್ಲಂಡದ ಹವೆ ತಿಂದು ಬಂದ ಶ್ರೀಮಂತನ ಕೊರಳಿಗೆ ಕಟ್ಟುವವರಿದ್ದಾರೆ ಒಳಗಿಂದ ಸೆರೆ, ಹೊರಗಿಂದ ಸವತಿ ಆ ಕೊರಳನ್ನು ಮೊದಲೇ ತಮ್ಮದನ್ನಾಗಿ ಮಾಡಿಬಿಟ್ಟಿದ್ದರೆ? ಆ ಮೇಲೆ ನನ್ನ ಗತಿ ನಾಯಿಗೂ ಬೇಡವಾದೀತು. ನಿಷ್ಪ್ರೇಮ ಲಕ್ಷಾಧೀಶನಿಗಿಂತ ರಸಿಕ ಭಿಕ್ಷಾಧೀಶನ ಪತ್ನಿಯಾಗುವುದು ಎಷ್ಟೋ ಒಳಿತು. ತನ್ನ ಅಳಿಯ ಶ್ರೀಮಂತನಿರಬೇಕೆಂದು ತಂದೆಯವರಿಗೆ ಅನಿಸುತ್ತಿದೆ. ಆದರೆ ಜಗತ್ತಿನಲ್ಲಿ ಶ್ರೀಮಂತಿಕೆ ಮತ್ತು ಸುಖ ಇವುಗಳ ವಿಷಯದಲ್ಲಿ ಮೂವತ್ತಾರರ ಅಂಕೆಯೇ ಕಾಣುತ್ತಿರುವದಲ್ಲವೆ? ತಂದೆಯವರು ಇಂದಿನ ತನಕ ನನ್ನ ದೈಹಿಕ ಆಕಾಂಕ್ಷೆಯನ್ನೆಲ್ಲ ಪೂರೈಸಿದರು. ಆಮರಣದ ವರೆಗೂ ನನ್ನ ದೈಹಿಕ ಆಕಾಂಕ್ಷೆ ಪೂರೈಸಲ್ಪಡಬೇಕೆಂದು ಶ್ರೀಮಂತ ಅಳಿಯನನ್ನು ಹುಡುಕುತ್ತಿದ್ದಾರೆ. ಆದರೆ ಶ್ರೇಷ್ಠವಾದದ್ದು ಮನಸ್ಸೋ ದೇಹವೋ? ಮನಸ್ಸೇ ಶ್ರೇಷ್ಠವಾದುದೆಂಬುದರಲ್ಲಿ ಸಂದೇಹವಿಲ್ಲ. ಸುಧಾಕರನು ಹೇಳುವಂತೆ ಬಡಬಗ್ಗರು ಉಪವಾಸ ಸಾಯುತ್ತಿರುವಾಗ ನಮಗೆ ಪಂಚ ಪಕ್ವಾನ್ನವನ್ನುಣ್ಣುವುದಕ್ಕೆ ಯಾವ ಅಧಿಕಾರವಿದೆ? ತಿನ್ನುವುದಕ್ಕೆ ಹೋಳಿಗೆ ತುಪ್ಪ, ತೊಟ್ಟುಕೊಳ್ಳುವುದಕ್ಕೆ ಮುತ್ತು ಮಾಣಿಕ, ವಾಸಿಸುವುದಕ್ಕೆ ಬಂಗಲೆ, ತಿರುಗಾಡುವುದಕ್ಕೆ

ಮೋಟರು ಸಿಕ್ಕಿತೆಂದರೆ ಜೀವನದ ಸಾರ್ಥಕತೆಯಾಯಿತೆ? ಸುಧಾಕರನ ಶಿಕ್ಷಣದಿಂದ ನನ್ನ ಮುಚ್ಚಿದ ಕಣ್ಣು ತೆರೆದಿದೆ. ತೆರೆದ ಕಣ್ಣಿನಿಂದ ನಾನು ನಿರ್ದಯ ಸಿರಿವಂತಿಕೆ ಹಾಗೂ ಸ್ವಾರ್ಥಸತ್ತೆಯ ಕಂದಕದಲ್ಲಿ ಹಾರುವುದು ಯೋಗ್ಯವೆನಿಸಲಾರದು. ಒಂದುವೇಳೆ ಅಂತಹ ಪ್ರಸಂಗ ಬಂದರೆ ತಂದೆಯ ವಿರುದ್ಧ ವರ್ತಿಸಬೇಕಾದೀತು. ತಂದೆಯವರು ಇಂದಿನ ವರೆಗೆ ನನ್ನ ಮನಸ್ಸನ್ನು ಎಲ್ಲಿ ಪರೀಕ್ಷಿಸಿದ್ದಾರೆ? ಮನೆಯಲ್ಲಿ ಅವರ ಹಾಗೂ ಚಿಕ್ಕಮ್ಮನ ವರ್ತನದ ಅರ್ಥವಾಗದಷ್ಟು ನಾನೇನು ತಿಳಿಯದವಳಲ್ಲ. ತನ್ನ ಮಗಳ ಮನಸ್ಸಿನ ಮೇಲೆ ಎಂತಹ ಪರಿಣಾಮವಾಗಬಹುದೆಂಬುದರ ಬಗ್ಗೆ ಅವರು ಎಂದಾದರೂ ಕಾಳಜಿ ತೆಗೆದುಕೊಂಡಿರುವರೆ? ಮಕ್ಕಳ ಶಾರೀರಿಕ ಯೋಗಕ್ಷೇಮವನ್ನು ನೋಡಿಕೊಂಡ ಮಾತ್ರಕ್ಕೆ ತಂದೆ ತಾಯಿಗಳ ಹೊಣೆ ಪೂರ್ಣವಾಗುವದಿಲ್ಲ."

"ಆದರೆ ತಂದೆಯವರೆದುರಿನಲ್ಲಿ ಅವರ ವಿರುದ್ಧ ಮಾತನಾಡುವ ಧೈರ್ಯ ನನ್ನ ಮೈಯೊಳಗೆಲ್ಲಿದೆ? ಅವರ ಭಯದಿಂದ ನನ್ನ ಬಾಯಿಂದ ಒಂದೂ ಶಬ್ದ ಹೊರಬೀಳಲಾರದು. ಇಂತಹ ಪ್ರಸಂಗದಲ್ಲಿ ನನಗೆ ಯಾರದಾದರೂ ಬೆಂಬಲ ಬೇಕು. ಸುಧಾಕರರು ನನಗೆ ಈ ವಿಷಯದಲ್ಲಿ ನಿಸ್ಸಂದೇಹವಾಗಿ ಸಹಾಯ ಮಾಡಬಹುದು. ನಾಳೆ ಕಲಿಸಲು ಬಂದೊಡನೆ ಈ ಉಂಗುರವನ್ನು ಅವರಿಗೆ ತಿರುಗಿ ಕೊಟ್ಟು, ಮಧುಕರನ ಕವಿತೆಯ ಪುಸ್ತಕ ತೋರಿಸಿ—ಫೋಟೋ ಸಂಬಂಧದ ನಿಜವಾದ ಮಾಹಿತಿ ಕೊಟ್ಟು ಪ್ರಸಂಗ ಬಿದ್ದರೆ ತನ್ನ ಪರವಾಗಿ ಮಾತನಾಡಿ ತಂದೆಯವರ ಮನ ಒಲಿಸಲು ವಿನಂತಿಮಾಡಿಕೊಳ್ಳಬೇಕು." ಪಾಪ! ಅಬೋಧ ಬಾಲಿಕೆ ವಾರುಣಿ! ನಾಳೆ ಬೆಳಿಗ್ಗೆ ಎಲ್ಲವೂ ತನ್ನಂತೆಯೇ ಆಗಬಹುದೆಂಬ ನಂಬಿಕೆಯಿಂದ ಆಕೆಗೆ ಗಾಢವಾದ ನಿದ್ರೆಹತ್ತಿತು. ಆದರೆ ಮನುಷ್ಯನ ಒಳ್ಳೆಯ ಆಸೆಯೂ ಕೂಡ ದೈವದ ಹೊಡೆತ, ದುರ್ಜನರ ಕಾರಸ್ಥಾನದಿಂದ ಇದ್ದಲ್ಲಿಯೇ ಇದ್ದುಬಿಡುತ್ತದೆಂಬ ಕಲ್ಪನೆ ಅವಳಿಗಿದ್ದಿಲ್ಲ.

× × + × ×

ಮರುದಿನ ವಾರುಣಿಯು ಅತ್ಯಾತುರತೆಯಿಂದ ಸುಧಾಕರನ ದಾರಿ ಕಾಯ್ದರೂ ಬರಲಿಲ್ಲ. ವಾಜಪೇಯ ಯಜ್ಞಾರ್ಥವಾಗಿ ಧನಕೂಡಿಸಲು ದಾದಾಸಾಹೇಬರ ಮನೆಯಲ್ಲಿ ಬಂದ ಪುಂಡಂಭಟ್ರ ಮಂಡಳಿಯವರಿಗೆ ವಾರುಣಿಯ ಚಿಕ್ಕಮ್ಮನ ಆಮಂತ್ರಣವಿದ್ದುದರಿಂದ ಊಟಕ್ಕೆ ಬರುವವರಿದ್ದರು. ಆ ಊಟಕ್ಕಾದರೂ ಸುಧಾಕರನನ್ನು ಕರೆಯಿಸಬೇಕೆಂದು ವಾರುಣಿಯ ಬಯಕೆಯಿತ್ತು. ಆದರೆ ಒಬ್ಬನನ್ನೇ ಕರೆಯುವದಕ್ಕೆ ಸಾಧ್ಯವಿರದ್ದರ ಮೂಲಕ ದಾದಾಸಾಹೇಬ, ಮಧುಕರರಿಗೂ ಆಮಂತ್ರಣವನ್ನು ರಾವಸಾಹೇಬರ ಮುಖಾಂತರವಾಗಿ ಕಳುಹಿದಳು. ಆದರೂ ಸುಧಾಕರ ಬರಲೇ ಇಲ್ಲ. ಇನ್ನೊಮ್ಮೆ ಕರೆಯಲು ಗಂಗಾಧರನನ್ನು ಕಳುಹಿಸಬೇಕೆಂದು ತಂದೆಯ ಹತ್ತರ ಹೇಳಿದರೂ ಸಾರ್ಥಕವಾಗಲಿಲ್ಲ. ಶಾಸ್ತ್ರಿಗಳು, ಪುಂಡಂಭಟ್ಟರು ಆ ಶ್ರೀಮಂತ ಸಕೇಶಿಯ ಅಡಿಗೆ, ಚಹಾ ಸ್ವೀಕರಿಸಿ ಧರ್ಮವನ್ನು ಉಳಿಸಿ ಹೋದರು!

ವಾರುಣಿಗೆ ಸುಧಾಕರನು ಏಕೆ ಬರಲಿಲ್ಲವೆಂಬುದೊಂದೇ ಚಿಂತೆ ಹತ್ತಿತ್ತು. ಸುಧೆಯಿಂದಲಾದರೂ ಈ ವಿಷಯ ತಿಳಿಯಬಹುದೆಂದೆಣಿಸಿ ದಾದಾಸಾಹೇಬರ ನೂತನ ಮಗುವನ್ನು ನೋಡುವ ನೆವಮಾಡಿ, ದಾದಾಸಾಹೇಬರ ಮನೆಗೆ ಬಂದಳು. ಬಾಗಿಲಲ್ಲಿಯೇ ಸುಂದರಾಬಾಯಿಯ ಆರ್ಭಾಟ ಕೇಳಬಂದಿತು. "ಏನಪ್ಪಾ ಇವಳ ಕೈಗುಣ! ರಾತ್ರಿ ಹುಡುಗನಿಗೆ ಹುಷಾರಾಗಿತ್ತು! ಮತ್ತೆ ಈ ಮಾರಿ ಹೋಗಿ ಕೈ ಹಚ್ಚಿದ್ದೇ ತಡ; ಮೊದಲಿನಂತೆ 'ಪಿಸ್ಟ' ಆರಂಭವಾಯಿತು. ಸುಟ್ಟುಹೋಗಲಿ ಈ ಸತ್ತವಳ ಕೈ!"

ಅತ್ತಿಗೆಯೂ ದನಿಗೂಡಿಸಿದಳು. "ನನ್ನ ಮಗುವನ್ನು ಸುಟ್ಟಕಣ್ಣಿನಿಂದ ನೋಡಲಿಕ್ಕೆ ಆಗುವದಿಲ್ಲ. ಇನ್ನೊಬ್ಬರ ಮಕ್ಕಳನ್ನು ಕೊಂದು ಹಾಕುವದಕ್ಕಿಂತ ತಾವೇ ಸತ್ತುಹೋದರೆ ಏನು ಹಾಳು?"

ಇದನ್ನೆಲ್ಲ ಕೇಳಿ ಹಿಂದೆಯೇ ಹೋಗಬೇಕೆಂದು ವಾರುಣಿಯು ಇಚ್ಛಿಸಿದಳು. ಆದರೆ ದುಃಖದಲ್ಲಿರುವ ಸುಧೆಯನ್ನು ಸಂತೈಸದೆ ಹೋಗುವುದು ಸರಿಕಾಣಲಿಲ್ಲ. ಅವಳು ಬಾಣಂತಿಯ ಕೋಣೆಯಲ್ಲಿ ಹೋಗಿ

ನಿಂತಳು. ಅತ್ತೆ ಅತ್ತಿಗೆಯರ 'ಪಿಟ್ಸ್' ಸುರುವಾದ ಶಿಶುವಿಗೆ ಸಂಬಾಳಿಸುವದರಲ್ಲಿಯೂ, ಸುಧೆಗೆ ಸಹಸ್ರನಾಮ ಹಾಕುವುದರಲ್ಲಿಯೂ ಗುಂಗಾಗಿಬಿಟ್ಟಿದ್ದರು. ವಾರುಣಿಯನ್ನು ಕಂಡೊಡನೆಯೇ ಸುಧೆಯು ಹಿತ್ತಿಲ ಮಗ್ಗುಲು ಕರೆದುಕೊಂಡು ಹೋದಳು. ಅವಳಿಗೆ ಅಳು ತಡೆಯುವದಾಗಲಿಲ್ಲ. ವಾರುಣಿಯು ಕುತ್ತಿಗೆಗೆ ಕೈ ಹಾಕಿ "ವಾರು, ದೇವರು ಏತಕ್ಕೆ ಈ ಜನ್ಮ ಕೊಟ್ಟನವ್ವಾ!" ಎಂದಳು.

ಸುಧೆಯ ಕಣ್ಣೊಳಗಿಂದ ಒಂದೇಸವನೆ ನೀರು ಹರಿಯುತ್ತಿತ್ತು. ಆವಳು ಸಂಕ್ಷಿಪ್ತವಾಗಿ ತನ್ನೆಲ್ಲ ಸಂಗತಿಯನ್ನು ತೋಡಿಕೊಂಡಳು. "ಮಧ್ಯಾಹ್ನದಲ್ಲಿ ಅತ್ತಿಗೆಯ ಕಾಲು ಒತ್ತುತ್ತ ಕುಳಿತುಕೊಂಡಿದ್ದೆ. ಕೆಲ ಹೊತ್ತಿನಲ್ಲಿ ಅತ್ತಿಗೆಗೆ ನಿದ್ದೆಹತ್ತಿತು. ಹತ್ತಿರದಲ್ಲಿಯೇ ಮಲಗಿದ ಕೂಸು ಎಚ್ಚತ್ತಿತು. ಆ ಸುಂದರ ಚಿಕ್ಕಕಣ್ಣು, ಚಿಕ್ಕಕೈ, ನಗುಮುಖನೋಡಿ ಎತ್ತಿಕೊಂಡು ಆಡಿಸಹತ್ತಿದೆ; ಮುದ್ದುಕೊಟ್ಟೆ. ಇಷ್ಟೆಲ್ಲ ನಡೆದದ್ದು ಮಧ್ಯಾಹ್ನ ಮೂರು ಘಂಟೆಯ ಸುಮಾರಿಗೆ. ನಂತರ ಐದು ಘಂಟೆಯ ಹೊತ್ತಿಗೆ ಹಿಂದಿನಂತೆ 'ಪಿಟ್ಸ್' ಸುರುವಾಯಿತು. ನಾನು ಮುಟ್ಟಿದುದರಿಂದಲೇ ಹೀಗಾಯಿತೆಂದು ಬಯ್ಯುತ್ತಿದ್ದಾರೆ."

"ಸುಧಾ, ನನ್ನದೊಂದು ಕೆಲಸವಿದೆ ನಿಮಗೆ ಸುಧಾಕರರ ಭೆಟ್ಟಿಯಾಗಬಹುದೇ?

"ಅತ್ತೆಯವರು ಬಂದಂದಿನಿಂದ ನಾನು ಅತ್ತ ಹೋಗುವುದು ಬಂದಾಗಿಬಿಟ್ಟಿದೆ."

"ಅದೇಕೆ?"

"ವಾರೂ, ಜಗತ್ತಿನಲ್ಲಿ ಸಾಲಗಾರನಾಗಿರುವುದು—ಸೊಸೆಯಾಗಿರುವುದು ಮಹಾಪಾಪ ನೋಡು. ಭಾವನವರು ಒಂದಕ್ಕೊಂದು ಮಾಡಿ ಅತ್ತೆಯ ತಲೆ ತುಂಬಿದ್ದರಿಂದ ನನ್ನನ್ನು ಕಂಡರೆ ಒಂದೇಸವನೆ ಶಪಿಸುತ್ತಾರೆ. ನಾನು ಸುಧಾಕರನೊಡನೆ ಯಮುವಿನ ಮನೆಗೆ ಹೋಗಿದ್ದೆನಲ್ಲವೇ? ಆ ಕ್ಷುಲ್ಲಕ ಸಂಗತಿಯನ್ನು ಪರ್ವತದಷ್ಟು ದೊಡ್ಡ ಮಾಡಿದ್ದಾರೆ. ನೀನು ಸುಧಾಕರರಿಗೊಂದು ಸುದ್ದಿ ಮುಟ್ಟಿಸುವಿಯಾ?"

"ಏಕಾದಶಿಯಲ್ಲಿ ಶಿವರಾತ್ರಿ! ಅವರು ನಮ್ಮ ಮನೆಗೂ ಬರದೆ ಎರಡು ದಿನಗಳಾದವು."

"ನಿನ್ನ ತಂದೆಯವರಿಗೆ ಸಲಹೆ ಕೊಡುವುದಕ್ಕೆ ನನ್ನ ಭಾವನವರಿದ್ದಾರಲ್ಲ!"

ಸುಧಾಕರನು ಮನೆಗೆ ಬಾರದಿರುವಂತೆ ಮಾಡಲು ಮಧುಕರನೇ ಮೂಲಕಾರಣನಿರಬೇಕೆಂಬ ವಾರುಣಿಯ ಸಂದೇಹ ಸುಧೆಯ ಮಾತಿನಿಂದ ದೃಢವಾಯಿತು.

"ಹಾಗಾದರೆ ಮುಂದೇನು ಮಾಡುವಿರಿ?"

"ಏನು ಮಾಡಬೇಕೆಂಬುದೇ ತೋಚದಾಗಿದೆ. ಅಲ್ಲದೆ ಆ ವಾಲೂವಲಿಯ ಸತ್ತ ಶಾಸ್ತ್ರಿ ಬೇರೆ ಬಂದಿದ್ದಾನೆ. ಕೂಸಿನ ಕೈಕಾಲು ಸೆಟೆಯ ಹತ್ತಿದ್ದಕ್ಕೆ ಮನೆಯಲ್ಲಿಯ ಭ್ರಷ್ಟಾಚಾರ ಕಾರಣವೆಂದು ಆ ಹೊಲೆಯ ಹೇಳಲಿಕ್ಕೂ ಹಿಂಜರಿಯಲಿಲ್ಲ. ವಾರೂ, ನಾಯಿ-ನರಿಗಳ ಪಾಡಾದರೂ ಬೇಕು; ಈ ಸಂಭ್ರಮ ಮಾತ್ರ ಸಾಕು"

ಅಷ್ಟರಲ್ಲಿ ಸುಂದರಾಬಾಯಿಯ ಗರ್ಜನೆ ಕೇಳಿಸಹತ್ತಿತು.

"ಎಲ್ಲಿಯೋ ನೆರಮನೆಗೆ ಹೋಗಿರಬಹುದು ಸತ್ತವಳು. ಹೋಗಲಿ; ಹೋಗಲಿ. ತಿರುಗಿ ಮನೆಯಲ್ಲಿ ಹೇಗೆ ಕಾಲಿಡುತ್ತಾಳೆ, ನೋಡುತ್ತೇನೆ. ತನ್ನ ಒಡಕು ಹಣೆ ತೆಗೆದುಕೊಂಡು ಮನೆಯಲ್ಲಿ ಕೂಡ್ರುವದನ್ನು ಬಿಟ್ಟು ಕಲಿಯೋದಕ್ಕೆ ಹೊರಟಿದ್ದಾಳೆ. ಬೆರಿಷ್ಟರ ಆಗಿ ನನ್ನ ಮೇಲೆ ಫಿರ್ಯಾದಿ ಮಾಡುವವಳಿದ್ದಾಳೋ ಏನೋ! ನನ್ನ ಮನೆಯಲ್ಲಿರುವದಾದಮೇಲೆ ನನ್ನ ಹೇಳಿಕೆ ಕೇಳಲೇ ಬೇಕು. ಕಲಿಸೋದಕ್ಕೆ ಎಲ್ಲರೂ ಬರುತ್ತಾರೆ. ಸಾಕೋದಕ್ಕೆ ಮಾತ್ರ ಯಾರೂ ಬರುವದಿಲ್ಲ. ಗಂಡನೊಬ್ಬನಿಲ್ಲದ ಮೇಲೆ ಊರೆಲ್ಲ ಮೆರೆಯೋದು; ನಾಳೆ ಪಂಢರಪುರದ ಖರ್ಚು ಮಾಡಲು ಆ ಸತ್ತವ ಸಿದ್ಧನಿದ್ದಾನೋ ಏನೋ!"

ಸುಂದರಾಬಾಯಿಯ ತೋಫಿನಿಂದ ಬಂದ ಕೊನೆಯ ಒಂದೆರಡು ಮದ್ದಿನ ಗುಂಡು ಸುಸ್ಸೆ, ವಾರುಣಿಯರ ಕಿವಿಯಲ್ಲಿ ಬಿದ್ದವು. ಸುಂದರಾ

ಬಾಯಿಯು ಇನ್ನೂ ಏನೇನೋ ಹೇಳುವವರಿದ್ದರು. ಆದರೆ ವಾರುಣಿಯನ್ನು ಕಂಡದ್ದರಿಂದ ಸ್ವರವೇ ಬದಲಿಸಿತು

"ವಾರುಣಿಯೆಂದರೆ ನೀವೇ ಅಲ್ಲವೇ? ನನಗೆ ಹಾಗೇ ಅನಿಸಿತು. ಈ ಸಾರಿ- ಬಂದವರಿಗೆ ಚಹಾ ಗಿಹಾ ಮಾಡಿ ಕೊಡಬಾರದೇನೇ? ಎಲ್ಲಿಲ್ಲವ ಹರಟೆ ಕೊಚ್ಚುತ್ತ ಕುಳಿತು ಬಿಟ್ಟಳು."

ಸುಧೆಯು ಚಹಾ ಮಾಡಲು ಒಳಗೆ ಹೋಗುವವಳಿದ್ದಳು "ನಿಲ್ಲು, ಶಾಸ್ತ್ರಿಗಳೂ ಏಳುವವರಿದ್ದಾರೆ. ಅವರು ನಿನ್ನ ಕೈ ಚಹಾ ಕುಡಿಯುವದಿಲ್ಲ. ನಾನೇ ಮಾಡಿ ಕೊಡುತ್ತೇನೆ."

ಸುಧಾಕರನ ಮನೆಯ ಕಡೆಗೆ ಶೂನ್ಯದೃಷ್ಟಿಯಿಂದ ನೋಡಿ ಒಂದು ನಿಟ್ಟುಸಿರು ಬಿಟ್ಟು ವಾರುಣಿಯೊಡನೆ ಒಳಗೆ ಹೋದಳು.

## ಪ್ರಕರಣ ೨೮.

ದಾದಾಸಾಹೇಬರಿಗೆ ಪುತ್ರೋತ್ಸವವಾಯಿತೆಂಬುದನ್ನು ಕೇಳಿ ಸುಂದರಾಬಾಯಿಯು ಗಡಬಡಿಯಿಂದ ಜಯಗಾಂವಕ್ಕೆ ಬಂದದ್ದು ಅವಳ ಸ್ವಭಾವಕ್ಕೆ ಶೋಭಿಸುವಂತಿತ್ತು. ಆದರೆ ಇವರಿಂದ ಸುಧೆಯು ಎಂದಿನಂತೆ ತಮ್ಮ ಮನೆಗೆ ಬರಲಾರದೆಂಬ ಸುಧಾಕರನ ತರ್ಕ ನಿಜವಾಗಿ ಬಿಟ್ಟಿತು. ಇಡೀ ದಿನದಲ್ಲಿ ಒಂದು ಸಾರೆಯೂ ಸುಧೆಯು ಸುಧಾಕರನ ಮನೆಯ ಕಡೆ ಹಾಯಲಿಲ್ಲ. ಜಾನಕಮ್ಮನಿಗೆ ಏನಿಲ್ಲೆಂದರೂ ನೂರು ಸಾರೆ ಅವಳ ನೆನಪಾಯಿತು. ಸುಧಾಕರನಿಗೆ ಏನನ್ನೋ ಕಳಕೊಂಡಂತೆ ಅನಿಸುತ್ತಿತ್ತು. ಆ ದಿನ ಅಂಗಳದಲ್ಲಿಯ ಹೂಗಳು ಎಂದಿನಂತೆ ಪ್ರಫುಲ್ಲಿತವಾಗಿ ಕಾಣಲಿಲ್ಲ. ಬಿಸಿಲು ಚನ್ನಾಗಿ ಬಿದ್ದಿದ್ದರೂ ಅವನ ದೃಷ್ಟಿಗೆ ಮಂದವಾಗಿ ಕಾಣುತ್ತಿತ್ತು. "ಮಧುಬಿಂದುವಿನಲ್ಲಿ ವಾರುಣಿಯ ಫೋಟೋ ನೋಡಿ ತಾನು ಕಲಿಸಿದ್ದು ವ್ಯರ್ಥವಾಯಿತೆಂದು ತಿಳಕೊಂಡನು. ತನ್ನ ಶಿಕ್ಷಣದಿಂದ ಆಕೆಯಲ್ಲಿ ಪರಿವರ್ತನವಾಗದ್ದನ್ನು ಮನಗಂಡಿದ್ದರಿಂದ ಆತನಿಗೆ ಇನ್ನಷ್ಟು ದುಃಖವಾಯಿತು. ಕಲ್ಲಿನ ಮೇಲೆ ತುಸು

ಹುಲ್ಲು ಬೆಳೆದ ಮಾತ್ರಕ್ಕೆ ಆ ಕಲ್ಲೇನೂ ಮೆತ್ತಗಾಗಲಾರದು. ಅವಳಿಗೆ ಕಲಿಸುವದನ್ನು ಸಂಪೂರ್ಣವಾಗಿ ಬಿಟ್ಟು ಬಿಡಬೇಕೋ ಹೇಗೆಂಬ ವಿಚಾರವಾಗಿ ಇನ್ನೂ ಒಂದು ನಿರ್ಣಯಕ್ಕೆ ಬಂದಿರಲಿಲ್ಲ. ಆದರೆ ತನಗೆ ಸಿಟ್ಟು ಬಂದಿದೆಯೆಂದು ತೋರಿಸುವುದಕ್ಕಾಗಿ ಆರೆಂಟು ದಿನ ಅತ್ತ ಸುಳಿಯಬಾರದೆಂದು ನಿಶ್ಚಯಿಸಿದನು.

ಮೂರನೇ ದಿನ ಕಳೆಯಿತು. ಮೂರನೇ ದಿನ ರಾವಸಾಹೇಬರ ಆಮಂತ್ರಣವನ್ನು ತೆಗೆದುಕೊಂಡು ಗಂಗಾಧರನು ಕರೆಯಲು ಬಂದ. ತನ್ನ ಹೇಳಿಕೆಯಂತೆ ಗಂಗಾಧರನನ್ನು ಇನ್ನೂ ತೆಗೆದುಹಾಕಲಿಲ್ಲವಾದುದರಿಂದ ಆಮಂತ್ರಣವನ್ನು ಸ್ವೀಕರಿಸುವುದು ಸಮಂಜಸವೆನಿಸಲಿಲ್ಲ. ಈ ಎರಡು ದಿನಗಳಲ್ಲಿ ಶಿಕ್ಷಣ ಸುಧಾರಣೆಯ ವಿಷಯವಾಗಿ ಪರಿಪರಿಯಿಂದ ವಿಚಾರಮಾಡಿ, ಅವುಗಳ ಬಗ್ಗೆ ಟಿಪ್ಪಣಿ ತೆಗೆಯಹತ್ತಿದನು. ಶಿಕ್ಷಣದ ನಿಜವಾದ ತತ್ವಗಳನ್ನು ವ್ಯವಹಾರದಲ್ಲಿ ಹೇಗೆ ತರಬೇಕೆಂಬುದೇ ಆತನು ಬಿಡಿಸಬೇಕಾದ ಸಮಸ್ಯೆಯಾಗಿದ್ದಿತು. ಆತನ ಟಿಪ್ಪಣಿ ಹೀಗಿತ್ತು.

### ಆದರ್ಶ ಶಿಕ್ಷಣ

(೧) 'ಶಿಕ್ಷಣದಂತೆ ಲಕ್ಷಣ' ವೆಂಬ ನಾಣ್ಣುಡಿಯು ಮನುಷ್ಯರಿಗೆಲ್ಲ ಅನ್ವಯಿಸುತ್ತದೆ. ನದಿಯ ಪ್ರವಾಹದ ದಿಕ್ಕು ಅದರ ಉಗಮಸ್ಥಾನದಲ್ಲಿದ್ದ ಪರ್ವತ ಮತ್ತು ನೆರೆಯ ಪ್ರದೇಶವನ್ನವಲಂಬಿಸಿರುವಂತೆ ಮನುಷ್ಯನ ಜೀವಿತಕ್ಕೆ ಅವನ ಪಾಲಕ ಮತ್ತು ಶಿಕ್ಷಕರೇ ಸಂಸ್ಕಾರ ಕೊಡುವರು. ಸ್ವಭಾವದಲ್ಲಿ ಆನುವಂಶಿಕ ಗುಣ ದೋಷಗಳ ಸೇರ್ಪಡೆಯಾಗುತ್ತಿದೆಯಾದರೂ, ಬಾಲ್ಯದಲ್ಲಿಯ ಸಂಸ್ಕಾರ, ಉತ್ತಮ ಸಹವಾಸ, ಉತ್ಕೃಷ್ಟ ಶಿಕ್ಷಣ ಮತ್ತು ಉಚ್ಚಧ್ಯೇಯಗಳು ಸಹ ಸ್ವಾಭಾವಿಕ ವಿಕಾಸವನ್ನುಂಟುಮಾಡುತ್ತವೆಂಬುದನ್ನು ಮರೆಯಲಾಗದು. ಮನುಷ್ಯನು ಸೃಷ್ಟಿಯ ಅರಸನೆಂದು ಹೇಳುವರು. ಮನುಷ್ಯೇತರರಲ್ಲಿ ಶಾರೀರಿಕ ಬೆಳವಣಿಗೆಯೇ ಹೆಚ್ಚು ಪ್ರಮಾಣದಲ್ಲಿರುತ್ತದೆ. ಬೌದ್ಧಿಕ ಶಿಕ್ಷಣಕ್ಕೆ ಒಂದು ಮಿತಿಯಿದೆ. ಆದರೆ ಮಾನವನ ಬುದ್ಧಿ ಮತ್ತು ಹೃದಯದ ವಿಕಾಸಕ್ಕೆ ಮಿತಿ ಇರುವದಿಲ್ಲ. ಕೊಲೆಗಾರ ವಾಲ್ಮೀಕಿಯು ಆದಿ ಕವಿಯಾಗಬಲ್ಲ.

(೨) ಮನುಷ್ಯನ ಬುದ್ಧಿ ಮತ್ತು ಹೃದಯವನ್ನು ವಿಕಾಸಗೊಳಿಸುವವರಾರು? ಶಿಕ್ಷಣವೇ ಸರಿ. ಪುಸ್ತಕದಿಂದಷ್ಟೇ ಶಿಕ್ಷಣ ದೊರೆಯುತ್ತದೆಂದಲ್ಲ. ಜಗತ್ತೆಂಬುದು ದೊಡ್ಡ ಪಾಠಶಾಲೆ. ಜನ್ಮಿಸಿದೊಡನೆಯೇ ಮನುಷ್ಯ ಪ್ರಾಣಿಯು ಈ ಸಾಲೆಯಲ್ಲಿ ಪ್ರಕೃತಿ ಮಾತೆಯ ಕೈಕೆಳಗೆ ಕಲಿಯ ಹತ್ತುವನು. ಸೃಷ್ಟಿಯೊಡನೆ ಸಮಾಜವೂ ಅವನ ಗುರುವಾಗಬಲ್ಲುದು. ಆದರೆ ಸೃಷ್ಟಿ ಮತ್ತು ಸಮಾಜವು ಮೂಕ ಗುರುವಾಗಿರುವುದರಿಂದ ಅವುಗಳಲ್ಲಿದ್ದ ವಿದ್ಯೆಯನ್ನು ಅರಿತುಕೊಳ್ಳುವುದಕ್ಕೆ ಶಿಷ್ಯನು ಬುದ್ಧಿಶಾಲಿಯೂ, ಸಹೃದಯಿಯೂ ಆಗಬೇಕಾಗಿರುತ್ತದೆ. ಸಾಮಾನ್ಯ ಮನುಷ್ಯನಲ್ಲಿ ಜನ್ಮತಃ ಈ ಗುಣವು ದೊರೆಯಲಾರದು. ಆದ್ದರಿಂದ ಮನುಷ್ಯನಿಗೆ ಇನ್ನೊಬ್ಬ ಮನುಷ್ಯನೇ ಶಿಕ್ಷಣ ಕೊಡುವುದು ಅವಶ್ಯವಿರುತ್ತದೆ. ಈ ಶಿಕ್ಷಣವನ್ನು ಪ್ರತ್ಯಕ್ಷ ರೀತಿಯಿಂದ ಶಿಕ್ಷಕರು, ಅಪ್ರತ್ಯಕ್ಷ ರೀತಿಯಿಂದ ಪಾಲಕರು ಕೊಡುತ್ತಾರೆ.

(೩) ಸದ್ಯದ ಪಾಲಕರು ತಮ್ಮ ಹೊಣೆಯನ್ನರಿಯರೆಂಬುದು ಸೂರ್ಯಪ್ರಕಾಶದಷ್ಟೇ ಸ್ಪಷ್ಟವಿದೆ ಆದರೆ ಇಂದಿನ ವಿದ್ಯಾರ್ಥಿಗಳೇ ಮುಂದಿನ ಪಾಲಕರಾಗುವುದರಿಂದ ಇಂದಿನ ಪೀಳಿಗೆಯ ಶಿಕ್ಷಣ ಸರ್ವಾಂಗಸುಂದರವಾದರೆ ಮುಂದಿನ ಪಾಲಕರ ಸಮಸ್ಯೆಯು ಬಿಡಿಸಲ್ಪಟ್ಟಂತೆಯಾಗುತ್ತದೆ. ಇಂದಿನ ಪಾಲಕರನ್ನು ಸುಧಾರಿಸುವುದೆಂದರೆ ಕಳಸವಿಟ್ಟ ಗುಡಿಯ ನೆಲಗಟ್ಟನ್ನು ಸರಿಪಡಿಸಲು ಯತ್ನಿಸಿದಂತೆಯೇ.

(೪) ಶಿಕ್ಷಣವೆಂದರೆ ಮನುಷ್ಯನ ಬುದ್ಧಿ ಮತ್ತು ಹೃದಯದ ವಿಕಾಸವೆಂದು ಒಪ್ಪಿಕೊಂಡರೂ ಅವನ ಹೊಟ್ಟೆಯ ಪ್ರಶ್ನೆ ಬಿಡಿಸಿದಂತಾಗುವದಿಲ್ಲ. ತೆರಪಿರುವ ತಲೆ ಭೂತದ ಮನೆಯಾಗಿರುತ್ತದೆ. ತೆರವಾದ ಹೃದಯದಲ್ಲಿ ಉಪಭೋಗದ ಪಿಶಾಚಿಗಳು ಕುಣಿಯಹತ್ತುತ್ತವೆ. ಹಾಗೂ ಬರಿಯ ಉದರದಲ್ಲಿ ಪ್ರಲಯಕಾಲದ ಉರಿಯು ಪ್ರಜ್ವಲಿಸುತ್ತದೆ. ಮನುಷ್ಯನೆಂದರೆ ಈಶ್ವರನ ಕಟ್ಟಿದ ಮಂದಿರವಿರುತ್ತದೆ. ಆ ಗುಡಿಯಲ್ಲಿ ಹೃದಯವೇ ಮೂರ್ತಿ, ಬುದ್ಧಿಯೇ ಬಂಗಾರದ ಕಳಸ, ಉದರವೇ ಗರ್ಭಗುಡಿ. ಮನುಷ್ಯನಿಗೆ ಹಿಂದೆ ಹತ್ತಿದ ಹೊಟ್ಟೆ ಹಾಗೂ ಮುಂದಿದ್ದ ಹೃದಯ; ಇವೆರಡನ್ನು ಸರಿಯಾಗಿ ನಡಿಸಿಕೊಂಡು ಹೋಗುವಂತಹ ಬೌದ್ಧಿಕ ಶಿಕ್ಷಣದ ಆವಶ್ಯಕತೆ ಇದೆ.

(೫) ಹೊಟ್ಟೆಯ ಪ್ರಶ್ನೆಯು ಸುಲಭವಿದ್ದಷ್ಟೇ ಬಿಗಿಯಿದೆ. ಹೊಟ್ಟೆ ಶ್ರೀಮಂತನಿಗೂ ಇದೆ, ಬಡವನಿಗೂ ಇದೆ. ಅವರ ಖರ್ಚಿನಲ್ಲಿ ಮಾತ್ರ ವ್ಯತ್ಯಾಸ. ಅಲ್ಲದೆ ಕಂಠಮಟ ಪಂಚಪಕ್ವಾನ್ನ, ಮಾಂಸವನ್ನು ಒಬ್ಬನು ತುಂಬಿದ್ದರೆ, ಇನ್ನೊಬ್ಬ ಒಣರೊಟ್ಟಿ, ಕಳ್ಳು ತುಂಬಿರಬಹುದು. ವಿದ್ಯಾರ್ಥಿಗಳಿಗೆ ತಮ್ಮ ಹೊಟ್ಟೆ ತುಂಬುವ ಶಿಕ್ಷಣದ ಜೊತೆಗೆ ಅದನ್ನು ಅತಿಯಾಗಿ ಶೇಖರಿಸಿಡದ ಶಿಕ್ಷಣವನ್ನೂ ಕೊಡಬೇಕು. ಅವರಿಗೆ ಸಾದಾತನದ ಶಿಕ್ಷಣ ದೊರೆಯುವಂತಿರಬೇಕು. ವಿಪುಲ ಹಣಗಳಿಸುತ್ತಿದ್ದರೂ, ಸತ್ಕಾರ್ಯಕ್ಕೆ ಉಪಯೋಗಿಸಬಹುದು.

(೬) ವಯಸ್ಕನಾದ ಮೇಲೆ ತನ್ನ ಹೊಟ್ಟೆ ತಾನು ತುಂಬಿಕೊಳ್ಳಬೇಕೆಂಬ ತತ್ವ ಕಾಣಲು ಸುಲಭವಾದರೂ ಆಚರಣೆಯಲ್ಲಿ ತರುವುದು ಬಲು ಬಿಗಿ. ಸಂಸ್ಥಾನಿಕ, ಜಮೀನುದಾರ, ಸಾವುಕಾರ, ಗಿರಣೀಮಾಲಕ ಮೊದಲಾದವರ ವಿಶಾಲ ಹಾಗೂ ಅಗಾಧ ಹೊಟ್ಟೆಯನ್ನು ತುಂಬುವವರಾರು? ನಾಲ್ಕು ತಿಂಗಳು ಅರೆಹೊಟ್ಟೆ ತಿಂದು ದಿನಗಳೆಯುವವರು- ಚಳಿಯಲ್ಲಿ ಗದಗದ ನಡುಗುತ್ತ ಕೂಲಿಕುಂಬಳಿ ಮಾಡುವವರು- ಮಕ್ಕಳಿಗೆ ಶಿಕ್ಷಣಕೊಡಿಸಲು ಸಾಧ್ಯವಿಲ್ಲದೆ ಉನ್ನತಿಯ ಮಾರ್ಗ ಕಟ್ಟಾಗಿಬಿಟ್ಟಂತಹ ಒಕ್ಕಲಿಗರು- ಇವರೇ ಅಲ್ಲವೇ? ಔರಂಗಜೇಬನು ಟೊಪ್ಪಿಗೆಯನ್ನು ಹೊಲಿಯುತ್ತಿದ್ದನೆಂಬ ಸಂಗತಿಯನ್ನು ಮಕ್ಕಳಿಂದ ಓದಿಸಿದ ಮಾತ್ರಕ್ಕೆ ಕೆಲಸ ತೀರಲಿಲ್ಲ. ಆದರ ಅರ್ಥ ಚನ್ನಾಗಿ ತಿಳಿಯುವಂತೆ ಲಕ್ಷ್ಯ ಪೂರೈಸಬೇಕು. ಸದ್ಯದ ಶಿಕ್ಷಣದಲ್ಲಿ ಶಾರೀರಿಕ ಶ್ರಮಕ್ಕೆ ಬಹಿಷ್ಕಾರ ಹಾಕಲ್ಪಟ್ಟಿದೆ. ಶಿಕ್ಷಣವು ಪ್ರತಿಯೊಬ್ಬ ಮನುಷ್ಯನ ಜನ್ಮಸಿದ್ಧ ಹಕ್ಕಾಗಿರುವುದರಿಂದ ಇನ್ನು ಮುಂದೆ ಶಿಕ್ಷಣವು ಸಾರ್ವತ್ರಿಕವಾಗಿಯೇ ತೀರುವದು. ಸಾರ್ವತ್ರಿಕ ಶಿಕ್ಷಣದಲ್ಲಿಯೂ ಶರೀರ ಶ್ರಮಕ್ಕೆ ಬೆಲೆಯಿಲ್ಲದೆ ಹೋದರೆ ಅದರಿಂದೇನೂ ಲಾಭವಾಗಲಿಕ್ಕಿಲ್ಲ. ಕಳೆದ ೨೫ ವರ್ಷಗಳಲ್ಲಿ ಶಿಕ್ಷಣದೊಡನೆ ನಿರುದ್ಯೋಗವೂ ಬೆಳೆದು ಬಂದಿದೆ. ಕಲಿತವರೆಲ್ಲ ನೌಕರಿಗಾಗಿ ಅಲೆಯುತ್ತಿದ್ದಾರೆ. ಸುಖವಸ್ತುಗಳಂತೂ ಕೈಕಾಲು ಅಲ್ಲಾಡಿಸಲಿಕ್ಕೂ ಅರಿಯರು. ಕಾಯಕಷ್ಟ ಮಾಡುವವರಿಗೂ ನೌಕರಿಯ ಆಸೆ ಹತ್ತಿದೆ. ನೌಕರಿ ಇಲ್ಲವೆ ಕುಳಿತು ಮಾಡುವ ಧಂದೆಯಿಂದ ನೂರಕ್ಕೆ

ಐದು ಮಂದಿಗೆ ಮಾತ್ರ ಹೊಟ್ಟೆ ತುಂಬಬಹುದು. ಉಳಿದವರೆಲ್ಲ ಉತ್ಪಾದಕ ಧಂದೆಯಲ್ಲಿ ತೊಡಗಲೇ ಬೇಕು. ದೇಶವು ಸುಖಿಯಾಗಿದ್ದರೆ ಮಾತ್ರ ಪ್ರತಿಯೊಬ್ಬನಿಗೂ ಸುಖವಾಗುವದು. ಸಂಪತ್ತಿಲ್ಲದ ದೇಶ ಎಂದೂ ಸುಖಿಯಾಗಲಾರದು. ಒಕ್ಕಲತನ, ಕಾರಖಾನೆಯ ಕೆಲಸ ಮೊದಲಾದ ಉತ್ಪಾದಕ ಧಂದೆ ಇಲ್ಲದೆ ದೇಶದ ಸಂಪತ್ತು ವರ್ಧಿಸಲಾರದು. ಬೌದ್ಧಿಕ ಶಿಕ್ಷಣ ಬೆಳಸಿ ದೇಶವು ಸಂಪನ್ನವಾಗಲು ಯತ್ನಿಸುವದೆಂದರೆ ಓರ್ವ ಬಂಜೆಯು ಇನ್ನೋರ್ವ ಬಂಜೆಗೆ ದತ್ತಕ ಕೊಡುವ ಆಶ್ವಾಸನ ಕೊಟ್ಟಂತೆಯೇ.

(೭) ಶರೀರ ಶ್ರಮದ ಪ್ರೇಮ ಮತ್ತು ಸಾದಾ ಜೀವನಗಳ ನಡುವೆ ಸಮೀಪ ಸಂಬಂಧವಿದೆ. ವಿದ್ಯಾರ್ಥಿಗಳಿಗೆ ಹಣಗಳಿಸುವುದಕ್ಕೆ ಎಷ್ಟು ಬೆವರಿಳಿಸಬೇಕಾಗುತ್ತದೆಂಬ ಕಲ್ಪನೆ ಚಿಕ್ಕಂದಿನಲ್ಲಿಯೇ ಬಂದು ಬಿಟ್ಟರೆ ಮುಂದೆ ಅವರು ದುಂದುಗಾರರಾಗಲಿಕ್ಕಿಲ್ಲ. ಇಷ್ಟೇ ಅಲ್ಲ; ಬಡವರ ಹಣದಿಂದ ವಿಲಾಸವನ್ನುಪಭೋಗಿಸಲಿಕ್ಕೂ ಇಂದಿನಷ್ಟು ಧೈರ್ಯಗೊಳ್ಳಲಿಕ್ಕಿಲ್ಲ. ಈ ದೃಷ್ಟಿಯಿಂದ ಶಿಕ್ಷಣದೊಳಗೆ ಒಕ್ಕಲತನ, ಬಾಗಾಯತ, ನೇಯ್ಗೆಯ ಕೆಲಸ ಮತ್ತು ಬಡಿಗತನ ಮೊದಲಾದ ಉದ್ಯೋಗಗಳ ಸಮಾವೇಶವಾಗಬೇಕು.

(೮) ಬೌದ್ಧಿಕ ಶಿಕ್ಷಣವು ಗಿಳಿಪಾಠದ ರೂಪದಿಂದ ಕೊಡಲ್ಪಡಬಾರದು. ಶಾಸ್ತ್ರೀಯ ಶಿಕ್ಷಣವನ್ನು ಪರೀಕ್ಷೆಯ ಮಟ್ಟಿಗೆ ಕಲಿಸದೆ ಹೊಸ ಹೊಸ ಅನ್ವೇಷಣ ಮಾಡುವುದಕ್ಕೂ, ದೇಶಕ್ಕೆ ಅವಶ್ಯವಿರುವ ಪಕ್ಕಾ ಮಾಲನ್ನು ದೇಶದಲ್ಲಿಯೇ ತಯಾರಿಸಿ, ದೇಶದ ಅಭಿವೃದ್ಧಿಯನ್ನು ಸಾಧಿಸುವದಕ್ಕೂ ಕೊಡಲ್ಪಟ್ಟರೆ ಅದರಿಂದ ನಿಜವಾದ ಕಲ್ಯಾಣವಾದೀತು. ಇತಿಹಾಸ, ಭೂಗೋಲ, ಆರೋಗ್ಯಶಾಸ್ತ್ರ ಕಲಿಸುವಾಗಲೂ ಹುಡುಗರ ಹಿತವನ್ನೇ ಲಕ್ಷ್ಯದಲ್ಲಿಡಬೇಕು.

(೯) ಸದ್ಯದ ಶಿಕ್ಷಣ ಪದ್ಧತಿಯಲ್ಲಿ ವಿದ್ಯಾರ್ಥಿಗಳ ಹೃದಯ ವಿಕಾಸವಂತೂ ಇಲ್ಲವೇ ಇಲ್ಲ. ವಾಙ್ಮಯದ ಅಭ್ಯಾಸ, ಇಲ್ಲವೆ ಶಿಕ್ಷಕನು ಕೊಡುವ ಉದಾಹರಣೆಗಳಿಂದ ಅವರ ಮೇಲಾಗುವ ಪರಿಣಾಮ ಚಿರಕಾಲ ನಿಲ್ಲಲಾರದು.

ಸಾಲೆಯ ವೇಳೆಯ ನಂತರ ಗುರು ಶಿಷ್ಯರ ಸಂಬಂಧವುಂಟಾಗುವುದೇ ಇಲ್ಲ. ವಿದ್ಯಾರ್ಥಿಯು ಆದರ್ಶವರ್ತನೆಯುಳ್ಳ ಶಿಕ್ಷಕನ ಸಹವಾಸದಲ್ಲಿ ತನ್ನ ಕಾಲಕಳೆಯುವಂತಾದರೆ ಅವನಲ್ಲಿ ಸಹಾನುಭೂತಿ, ದಯೆ, ನಿರ್ವ್ಯಸನ, ಸಹಕಾರಬುದ್ಧಿ ಬೆಳೆಯುವದರಲ್ಲಿ ಸಂದೇಹವಿಲ್ಲ.

(೧೦) ಅವರವರ ಒಲಿವಿನಂತೆ ಶಿಕ್ಷಣ ಕೊಡಬೇಕು. ಕಲೆ ಮತ್ತು ಸೃಷ್ಟಿ ಸೌಂದರ್ಯದ ವಿಷಯದಲ್ಲಿ ಅವರಿಗೆ ಅಭಿರುಚಿ ಹುಟ್ಟುವಂತೆ ಮಾಡಬೇಕು. ಶಾರೀರಿಕ ಶಿಕ್ಷಣದ ಉಪೇಕ್ಷೆಯಾಗಬಾರದು. ಇವುಗಳಲ್ಲಿ ಕೆಲವಾದರೂ ಕಾರ್ಯರೂಪಕ್ಕೆ ಬರುವದಾದರೂ, ಸಾಲೆಯ ಎಲ್ಲ ಶಿಕ್ಷಕರು ಈ ಕಾರ್ಯಕ್ಕೋಸ್ಕರ ತಮ್ಮ ತನುಮನ ಧನಗಳನ್ನು ಅರ್ಪಿಸಬೇಕು. ಸಾದಾತನದಿಂದ ಇರುವುದು- ವಿದ್ಯಾರ್ಥಿಗಳನ್ನು ಗೆಳೆಯರಂತೆ ನಡಿಸಿಕೊಳ್ಳುವುದು–ತನ್ನ ಜ್ಞಾನಸಂಪತ್ತನ್ನು ಹೆಚ್ಚಿಸಿ ಸಂಸ್ಥೆಗೆ ಆದಷ್ಟು ಹೆಚ್ಚಿಗೆ ಉಪಯೋಗಕ್ಕೆ ಬೀಳುವುದು– ಈ ಗುಣಗಳಿಲ್ಲದ ಹೊರತು ಆತನು ಶಿಕ್ಷಕನೇ ಅಲ್ಲ.

ಸುಧಾಕರನು ತಾನೇ ತೆಗೆದ ಟಿಪ್ಪಣಿಯನ್ನು ಇನ್ನೊಮ್ಮೆ ಓದಿದ. ತನ್ನ ಮನಸ್ಸಿನಲ್ಲಿದ್ದುದು ಶಬ್ದಗಳಲ್ಲಿ ಪೂರ್ಣವಾಗಿ ಇಳಿಯಲಿಲ್ಲವೆಂದು ಅನಿಸಿತು.

× × × × ×

ಮಾರನೇ ದಿನವೂ ಸುಧೆಯು ಬರಲಿಲ್ಲ. ಈಗ ಮಾತ್ರ ಜಾನಕಮ್ಮನಿಗೆ ತಡೆಯುವದಾಗಲಿಲ್ಲ. ಸುಂದರಾಬಾಯಿಯೇ ಈ ಸ್ಥಿತ್ಯಂತರಕ್ಕೆ ಕಾರಣವೆಂದೂ, ತಾನು ಹೋದರೆ ತನಗೂ ಅಪಮಾನವಾಗಬಹುದೆಂದೂ ಆಕೆ ಅರಿತಿದ್ದಳು. ಆದರೂ ಸುಧೆಯ ಮೇಲಿನ ವಾತ್ಸಲ್ಯ ಆಕೆಯನ್ನು ಹಾಗೇ ಕೂಡ್ರಗೊಡದ್ದರಿಂದ ಹಿತ್ತಲಿನ ಬಾಗಿಲಿಂದ ದಾದಾಸಾಹೇಬರ ಮನೆಗೆ ಹೊರಟಳು.

ಸುಧಾಕರನೂ ಸುಧೆಯ ಪ್ರಶ್ನೆಯನ್ನು ಅಮ್ಮನ ಮುಂದಿಟ್ಟು ವಿನಾ ದಕೊಂದು ನಿರ್ಣಯ ಮಾಡಿಬಿಡಬೇಕೆಂಬುದರ ಬಗ್ಗೆ ವಿಚಾರ ಮಾಡುತ್ತ ತನ್ನ ಕೋಣೆಯಲ್ಲಿ ಕುಳಿತಾಗ ಗಂಗಾಧರನು ಗುಲಾಬಿ ಬಣ್ಣದ

ಒಬ್ಬೋಟಿಯನ್ನು ಹಿಡಿದುಕೊಂಡು ಬಂದನು. ಅದರ ಮೇಲೆ ವಿಳಾಸವಿರಲಿಲ್ಲ. ತಾನು ವಾರಗಟ್ಲೆ ವಾರುಣಿಗೆ ಕಲಿಸಲು ಹೋಗದ್ದರಿಂದ ರಾವ ಸಾಹೇಬರೇ ಬರೆದಿರಬೇಕೆಂದು, ಊಹಿಸಿದನು. ಆದರೆ ತರ್ಕ ಮತ್ತು ಸತ್ಯವು ಹಲವು ಬಾರಿ ಕಣ್ಣುಮುಚ್ಚಾಣಿಕೆಯ ಆಟವಾಡುತ್ತಿರುತ್ತದೆಯೆಂಬುದು ಪತ್ರ ಓದಿದ ಮೇಲೆ ಗೊತ್ತಾಯಿತು. ಅದರಲ್ಲಿ ಹೀಗಿತ್ತು.

"ತಾವು ನನ್ನ ಮೇಲೆ ಕೋಪಿಸಿರುವಿರಲ್ಲವೇ? ಕಳೆದ ನಾಲ್ಕಾರು ದಿನಗಳಿಂದ ತಾವು ಬಾರದೆ ಇದ್ದುದರಿಂದ ಬೇಸರ ಬಂದುಬಿಟ್ಟಿದೆ. ತಮಗೆ ಸೇರದಂತಹ ಸಂಗತಿಯೊಂದು ಸಂಭವಿಸಿದೆಯೆಂಬುದನ್ನು ಒಪ್ಪಿಕೊಳ್ಳುತ್ತೇನೆ. ಆದರೆ ಅದರಲ್ಲಿ ನಾನು ಎಷ್ಟರಮಟ್ಟಿಗೆ ಅಪರಾಧಿಯೆಂಬುದನ್ನು ನಿರ್ಣಯಿಸಬಾರದೇ? ಈ ವಿಶಾಲ ಜಗತ್ತಿನಲ್ಲಿ ನನಗೆ ನಿಮ್ಮ ಹೊರತು ಇನ್ನಾರಿರುವರು? ಅಪ್ಪ ಮತ್ತು ಚಿಕ್ಕಮ್ಮ! ಇದ್ದಲಿಯನ್ನು ಎಷ್ಟು ತೊಯ್ದರೂ ಸುಣ್ಣವಾಗಬಲ್ಲುದೇ?

ಮನೆಯೊಳಗೆ ತಮ್ಮೊಡನೆ ಮನಬಿಚ್ಚಿ ಮಾತಾಡಲು ಬರುವಂತಿಲ್ಲ. ಅಲ್ಲದೆ ತಮ್ಮ ಬರುವಿಕೆಯು ತಂದೆಯವರಿಗೆ ಸೇರುತ್ತದೋ ಇಲ್ಲವೋ? ಕಾಣೆಯಾದ ತಮ್ಮ ವಸ್ತುವೊಂದು ದೊರೆತಿದೆ. ಅವನ್ನು ನಿಮಗೆ ತೋರಿಸುವೆನು. ನನಗೆ ಮುಂದೇನು ಮಾಡಬೇಕೆಂಬುದು ತಿಳಿಯದಾಗಿದೆ. ತಾವು ಹೇಳಿದಂತೆ ನಡೆಯಲು ಸಿದ್ಧಳಿರುವೆನು. ತಂದೆಯೊಬ್ಬ ಆಯ್. ಸಿ. ಎಸ್. ನನ್ನು ಹುಡುಕಿದರೂ ನಾನವನೊಡನೆ ಲಗ್ನವಾಗಲಿಕ್ಕಿಲ್ಲ. ಆದರೆ ನನ್ನ ಆಯುಷ್ಯ ಸಾರ್ಥಕವಾಗುವಂತಹ ದಾರಿಯೊಂದನ್ನು ನೀವು ತೋರಿಸುವಿರಲ್ಲವೇ?

ದುಡ್ಡಿನ ಮುಂದೆ ಧರ್ಮವೂ ತಲೆಬಾಗುತ್ತದೆಂಬುದು ಈಗ ಗೊತ್ತಾಯಿತು.' ನಿನ್ನೆ ದಾದಾಸಾಹೇಬರಲ್ಲಿ ಇಳಕೊಂಡಿದ್ದ ಪುಂಡರಿಭಟ್ಟರು ಹಾಗೂ ಶಾಸ್ತ್ರಿಗಳು ಸುಧೆಯ ಕೈ ಚಹಾ ಮುಟ್ಟದಿದ್ದರೂ ನಮ್ಮ ಚಿಕ್ಕಮ್ಮನ ಅಡಿಗೆಯನ್ನು ಸವಿಮಾಡಿಕೊಂಡು ಉಂಡರು.

ತಾವು ಖಂಡಿತವಾಗಿ ಭೆಟ್ಟಿಯಾಗುವಿರಲ್ಲವೇ? ತಂದೆಯವರು ರಾತ್ರಿ ಒಂಭತ್ತು ಘಂಟೆಗೆ ಮಲಗುತ್ತಾರೆ. ಗಂಗಾಧರನಂತೂ ಯಾವಾ

ಗಲೂ ಅಮಲಿನಲ್ಲಿಯೇ ಇರುತ್ತಾನೆ. ಒಂಭತ್ತು ವರೆ ಹತ್ತರ ಸುಮಾರಿಗೆ ನಾನು ನಮ್ಮ ಮನೆಮುಂದಿನ ದಿನ್ನೆಯ ಕೆಳಗಿದ್ದ ಮಾವಿನಗಿಡದ ಬಳಿ ಬರುವೆನು. ಅಲ್ಲಿ ನಾವು ಮನಬಿಚ್ಚಿ ಮಾತನಾಡಬಹುದು. ಖಂಡಿತವಾಗಿ ಬರುವಿರಲ್ಲವೇ? ಕೋರಲಾಣೆಯಿದೆ. ತಮ್ಮೊಡನೆ ಯಾವ ಸಂಬಂಧವಿಲ್ಲದಿದ್ದರೂ ತಮ್ಮವಳೇ ಆದ,

"ವಾರುಣಿ"

ಪತ್ರ ಓದುತ್ತಿದ್ದಂತೆ ಸುಧಾಕರನ ತಲೆಯಲ್ಲಿ ಅನೇಕ ವಿಚಾರಗಳ ತಾಕಲಾಟವಾರಂಭವಾಯಿತು. ಮಧುಕರನಿಗೆ ಬರೆದ ಪತ್ರ ತಪ್ಪಿ ತನಗೆ ಕಳಿಸಿರಬೇಕೆಂಬ ಭಾವನೆಯಿಂದ "ಈ ಪತ್ರ ಮಧುಕರನಿಗೆ ಒಯ್ದು ಕೊಡು" ಎಂದನು. ಗಂಗಾಧರನ ಮೋರೆ ತಪ್ಪಿತಸ್ಥನಂತೆ ಕಪ್ಪಿಟ್ಟಿತು. "ನಿಮಗೇ ಕೊಡಲು ಹೇಳಿದ್ದಾರ್ರೀ" ಎಂದ.

ತನ್ನ ಯಾವ ವಸ್ತು ಕಳೆದಿದೆಯೆಂಬುದರ ಅರ್ಥವಾಗಲಿಲ್ಲ. ನನ್ನ ಬರುವಿಕೆಯು ತಂದೆಯವರಿಗೆ ಸೇರಲಿಕ್ಕಿಲ್ಲವೆಂಬ ಸಮಸ್ಯೆಯನ್ನು ಬಿಡಿಸಲಾರದಾದ. ಏನೇ ಆಗಲಿ, ಹುಡುಗಿ ಅಡ್ಡದಾರಿ ಹಿಡಿಯುತ್ತಿರುವುದರಿಂದ ಈ ಪತ್ರ ತಂದೆಗೆ ತೋರಿಸಿ, ಅವಳಿಗೆ ಕಲಿಸಲು ಹೋಗುವದನ್ನು ನಿಲ್ಲಿಸಬೇಕೆಂದು ನಿರ್ಧರಿಸಿಕೊಂಡ.

ಜಾನಕಮ್ಮ ಮನೆಯಲ್ಲಿ ಹೇಳದೇ ಹೋದದ್ದರಿಂದ ಬೇಗನೇ ಬಂದಳು. ಆದರೆ ಆಕೆ ತಂದ ಸುದ್ದಿ ಸುಧಾಕರನಿಗೆ ಹಿತಾವಹವಿರಲಿಲ್ಲ. ದಾದಾಸಾಹೇಬರ ಹೆಂಡತಿಯು ಗರ್ಭಿಣಿಯಿರುವಾಗ ಸಕೇಶಿ ಸುಧೆಯು ಅಡಿಗೆಯುಂಡದ್ದರಿಂದ ಹುಟ್ಟಿದ ಶಿಶುವಿಗೆ ಈ ರೋಗ ಹತ್ತಿದೆಯೆಂದು ಶಾಸ್ತ್ರಿಗಳು ತೀರ್ಮಾನಿಸಿದ್ದರಿಂದ ಸುಂದರಾಬಾಯಿಯು ಶೀಘ್ರದಲ್ಲಿಯೇ ಸುಧೆಯನ್ನು ಮಡಿಮಾಡಿಸಿ ಬಿಡುವವಳಿದ್ದಳು.

ಈ ಸಂಗತಿ ಹೇಳುತ್ತಿರುವಾಗ ಜಾನಕಮ್ಮನಿಗೆ ಅಳು ತಡೆಯಲಿಕ್ಕಾಗಲಿಲ್ಲ. ಸುಧಾಕರನಿಗೂ ಅಳುವು ತಡೆಯದಾಯಿತು. ಅವನು ತಾಯ ಸಮೀಪಕ್ಕೆ ಹೋಗಿ ಅವಳ ಬಲಗೈಯ್ಯನ್ನು ತನ್ನ ತಲೆಯಮೇಲಿಟ್ಟು,

"ಅಮ್ಮಾ, ಸುಧೆಯ ಈ ಸಂಗತಿಯನ್ನು ನೋಡಿ ನೀನೂ ಸುಮ್ಮನಿರುವಿಯಾ?"

"ಚಿನ್ನದಂತಹ ಹುಡುಗಿಯ ಗತಿ ಹೀಗಾಗುವದನ್ನು ನೋಡಲಾರೆ ಆದರೆ ಏನು ಮಾಡಲಿ? ಅವಳು ಪರಕೀಯಳು."

"ಇಂದು ಪರಕೀಯಳಾಗಿದ್ದರೂ ನಾಳೆ ನಮ್ಮವಳಾಗಲಿಕ್ಕಿಲ್ಲವೇ? ಸುಧೆಯಂತಹ ಸೊಸೆಯು ತ್ರಿಭುವನದಲ್ಲಿ ಹುಡುಕಿದರೂ ಸಿಗಲಾರಳು."

"ನಮ್ಮ ಪುಣ್ಯದ ಬಲ ಅಷ್ಟು ಚನ್ನಾಗಿರದ ಮೇಲೆ ಸುಧೆಯಂತಹ ಸೊಸೆಯು ಸಿಗಲಾರಳು. ಆದರೆ... ...ಆದರೆ ಎರಡನೆಯ ಸಂಬಂಧ ದೇವರು ಒಪ್ಪಬಹುದೇ?"

"ದೇವರಿಗೆ ಪ್ರಿಯವಾದುದಾವುದೆಂದು ಸದಾನಂದ ಸ್ವಾಮಿಯವರು ಹೇಳಬೇಕೇ ಹೊರತು ನಮ್ಮಂತಹ ಸಂಸಾರಿಗಳಲ್ಲ."

ಜಾನಕಮ್ಮನೂ ವಿಚಾರ ಮಾಡಹತ್ತಿದಳು. ಸುಧಾಕರನ ಮಾತು ಹೌದೆನಿಸಿತು.

"ಧರ್ಮವೆಂದು ನಾವು ತಿಳಿದುಕೊಂಡದ್ದೆಲ್ಲ ಶಾಸ್ತ್ರಿಗಳಂತಹ ಕಡು ಪಾಪ ಮಾಡಿ ಬಡವಾರ ಬಡಿಯುವ ಧರ್ಮಲಂಡರು ಹೆಚ್ಚಾಗಿ ನಿರ್ಣಯಿಸಿದ್ದಾಗಿದೆ. ಸತ್ತ ಹೊರತು ಸ್ವರ್ಗವಿಲ್ಲ; ಸ್ವಾರ್ಥತ್ಯಾಗದ ಹೊರತು ದೇವರಿಲ್ಲ. ಸದಾನಂದ ಸ್ವಾಮಿಯವರು ಇಂದಿಗೆ ಹತ್ತು ವರ್ಷಗಳಿಂದ ದೈವಭಕ್ತಿಯಲ್ಲಿ ನಿರತರಾಗಿದ್ದಾರೆ. ಕಾಶಿಯಿಂದ ರಾಮೇಶ್ವರದ ವರೆಗಿನ ಎಲ್ಲ ತೀರ್ಥಯಾತ್ರೆ ಮಾಡಿ-ಹಿಮಾಲಯದಲ್ಲಿಯ ಸಾಧುಗಳ ಸಹವಾಸದಲ್ಲಿದ್ದು-ಸಂಸಾರ ಪಾಶವನ್ನು ಹರಿದು ಸಂಪಾದಿಸಿದ ಧರ್ಮ ಮತ್ತು ದೇವರ ಜ್ಞಾನವೇ ನಿಜವಾದ ಧರ್ಮ ಹಾಗೂ ಜ್ಞಾನವಲ್ಲವೇ? ಮುತ್ತಿನ ಪರೀಕ್ಷೆಗೆ ಮುತ್ತುಗಾರನೇ ಬೇಕಾಗುವಂತೆ ನಿಜವಾದ ಧರ್ಮವನ್ನು ಗೊತ್ತು ಹಚ್ಚಲು ಸನ್ಯಾಸಿಯೇ ಬೇಕು. ಯಾಕೆಂದರೆ ಅವನಿಗೆ ಹಣ-ಕಾಸು, ವಸ್ತು-ಒಡವೆ, ಹೊಲ-ಮನೆ ವಿಲಾಸ, ವೈಭವಗಳ ಬೆನ್ನು ಹತ್ತಿ ಸುಳ್ಳು ಮಾತನಾಡುವ ಹಾಗೂ ತನ್ನನ್ನೇ ಮೋಸಗೊಳಿಸಿಕೊಳ್ಳುವ ಪ್ರಸಂಗ ಬರುವದಿಲ್ಲ.

ಸ್ವಾಮಿಯವರನ್ನು ಕಾಣುವದಕ್ಕೆ ನಿರ್ಣಯವಾಯಿತು. ಸದಾನಂದ ಸ್ವಾಮಿಯವರು ಒಪ್ಪಿದರೆ ಮುಂದಿನ ಕಾರ್ಯವನ್ನು ಅದೇ ರಾತ್ರಿ ಮುಗಿಸಬೇಕೆಂಬ ನಿರ್ಣಯದಿಂದ ಸುಧಾಕರನು ಶಾಲೆಗೆ ಹೊರಟು ಹೋದನು.

## ಪ್ರಕರಣ ೨೯.

ಸುಧಾಕರನು ಶಾಲೆಯಲ್ಲಿ ವಾರುಣಿಯನ್ನು ಕಂಡಾಗ ಮಧುಕರನಿಗೆ ಬರೆದ ಪತ್ರ ತನ್ನ ಕೈಯಲ್ಲಿ ಸಿಕ್ಕಿದ್ದು ಈಕೆಗೆ ಗೊತ್ತಿರಲಿಕ್ಕಿಲ್ಲವೆಂದು ತಿಳಿದು ನಗು ಬಂದಿತು. ಆದರೆ ತನ್ನ ನಗುವಿನಿಂದ ಆಕೆ ಗೊಂದಲದಲ್ಲಿ ಬೀಳಬಹುದೆಂಬ ಕಲ್ಪನೆ ಮಾತ್ರ ಸುಳ್ಳಾಯಿತು. ಅಷ್ಟೇ ಅಲ್ಲ; ಸುಧಾಕರನ ಹಾಸ್ಯ ಮುದ್ರೆ ಕಂಡೊಡನೆಯೇ ರವಿಕಿರಣದಿಂದ ಮಾಯವಾಗುವ ಮೋಡದಂತೆ ಅವಳ ಮುಖದ ಮೇಲಿನ ಚಿಂತೆಯ ಚಿಹ್ನವು ಮಾಯವಾಗಿ ಬಿಟ್ಟಿತು.

ನಡುವಿನ ಬಿಡುವಿನಲ್ಲಿ ಸುಧಾಕರನ ಶಿಕ್ಷಣ ಸುಧಾರಣೆಯ ವಿಷಯದ ಚರ್ಚೆ ನಡೆಯುವದಿತ್ತು. ಆದರೆ ಯಾರೊಬ್ಬರೂ ಸಹಕಾರ ತೋರಲಿಲ್ಲ. ಮಧುಕರನಂತೂ ಸಂದರ್ಭ ಸಿಕ್ಕಾಗಲೆಲ್ಲ ಗೇಲಿಮಾಡುತ್ತಿದ್ದನು. ರಾತ್ರಿ ಭೆಟ್ಟಿಯಾಗಲು ವಾರುಣಿಯು ಬರೆದ ಪತ್ರದ ಸುಳಿವು ಹತ್ತಿದೆಯೆಂದು ಅವನ ಮಾತಿನಿಂದ ವ್ಯಕ್ತವಾಗುತ್ತಿತ್ತು.

"ತನ್ನನ್ನು ಹೊಡೆಯುವದಕ್ಕೋಸ್ಕರ ಮಧುಕರನು ಕಪಟಜಾಲವನ್ನು ಪಸರಿಸಿರಲಿಕ್ಕಿಲ್ಲವಷ್ಟೇ! ವಾರುಣಿಯೂ ಅವನ ಈ ಒಳಸಂಚಿನಲ್ಲಿ ಸೇರಿರಬಹುದು." ಎಂದು ಯೋಚಿಸಿದನು.

ಕ್ಷುಬ್ಧವಾದ ಸಮುದ್ರದಂತೆ ಸುಧಾಕರನ ಮನಸ್ಸು ಪ್ರಚಂಡ ವಿಚಾರ ಲಹರಿಗಳಿಂದ ತುಂಬಿ ಹೋಯಿತು. ಮನೆಗೆ ಬಂದೊಡನೆಯೇ

ಕಾಳಿಗೊಂದು ಪತ್ರ ಬರೆಯಲು ಕುಳಿತುಕೊಂಡ. ಇಂದು ಅವನ ಮನಸ್ಸು ಸಹಿಸಲಾರದಷ್ಟು ಕ್ಷೋಭೆಗೊಂಡಿತ್ತು. ಅದರಿಂದ ಅವನಿಗೆ ಪತ್ರದ ಮುಖಾಂತರ ತನ್ನ ದುಃಖ ಕಡಿಮೆ ಮಾಡಿಕೊಳ್ಳದ ಹೊರತು ಸಮಾಧಾನವಾಗುವದು ಸಾಧ್ಯವಿದ್ದಿಲ್ಲ. ಪತ್ರ ಬರೆಯುವಾಗ ಅಲ್ಲಲ್ಲಿ ನಿಂತು ಯೋಚಿಸಿ ಬರೆಯುತ್ತಿದ್ದನು. ಅಡ್ಡತಿಡ್ಡ ದಾರಿಯಲ್ಲಿ ವಾಹನವನ್ನು ಬಲು ಎಚ್ಚರದಿಂದ ನಡೆಯಿಸಬೇಕಾಗುವಂತೆ ಸುಧಾಕರನು ತನ್ನ ಧ್ಯೇಯಕ್ಕೆ ಬಡಿದ ಎಲ್ಲ ಹೊಡೆತಗಳನ್ನು ಲಕ್ಷಕ್ಕೆ ತಂದು ಪತ್ರಬರೆದು ಲಖೋಟಿಯಲ್ಲಿ ಹಾಕಿ ಬಂದುಮಾಡಿದನು. ರಾವಸಾಹೇಬರಿಗೆ ವಾರುಣಿಯ ಪತ್ರವನ್ನು ತೋರಿಸಬೇಕೆಂಬ ಹೇತುವಿನಿಂದ ಮೇಜಿನ ಮೇಲೆ ತೆಗೆದಿಟ್ಟನು. ಬಲಅಂಗೈ ಮೇಲೆ ತಲೆ ಇಟ್ಟು ರಾತ್ರಿ ಸ್ವಾಮಿಯವರು ಅಮ್ಮನಿಗೆ ಯಾವ ಬಗೆಯಿಂದ ತಿಳಿಸಿ ಹೇಳಬಹುದೆಂಬ ವಿಚಾರದಲ್ಲಿ ಅವನು ಎಷ್ಟೋ ಹೊತ್ತು ಮಗ್ನವಾಗಿಬಿಟ್ಟನು. ಆ ಮೇಲೆ ತಲೆ ಎತ್ತಿದಾಗ ಕಾಂಚನಮ್ಮನ ದೃಷ್ಟಿಗೆ ಬಿದ್ದಿತು. ಈ ಚಿತ್ರದಂತೆ ವಾರುಣಿಯೂ ಮೋಸಗಾರಳಾದಳಲ್ಲವೇ ಎಂದು ಯೋಚಿಸುವಷ್ಟರಲ್ಲಿ ಯಾರೋ ಬರುವ ಸಪ್ಪಳ ಕೇಳಿಸಿತು. ಅವರು ಚಿತ್ರಕಾರ ಕಾಳೆಯಾಗಿದ್ದರು. ಸುಧಾಕರನು ತನ್ನ ಕಣ್ಣನ್ನು ತಾನೇ ನಂಬದಾದ.

\+ × × × ×

ಚಹಾಪಾನ ಮುಗಿಸಿ ಯೋಗಕ್ಷೇಮ ವಿಚಾರಿಸಿ ಸುಧಾಕರನು ಕಾಳಿಗೆ ಬಂದ ಕಾರಣವನ್ನು ಕೇಳಿದನು. 'ಹೀಗೇ ನಿನ್ನನ್ನು ನೋಡಿ ಹೋಗೋಣವೆಂದು ಬಂದೆ' ಎಂದಿಷ್ಟೇ ಹಾರಿಸಿ ನುಡಿದನು.

"ಮೋಟರು ಮನೆತನಕಾ ಏಕೆ ಬರಲಿಲ್ಲ?"

"ಹತ್ತಿರದಲ್ಲಿಯೇ ಕೆಟ್ಟು ಹೋದದ್ದರಿಂದ ನಡೆದು ಬಂದೆ. ಇಲ್ಲಿ ಬಾಗದ ಮೇಲೆ ಒಬ್ಬ ಹುಡುಗ ಸಿಕ್ಕಿದ. ಆತನು ರಾವಸಾಹೇಬರ ಮನೆಯ ಹಾದಿಯಿಂದ ಇಲ್ಲಿಗೆ ಕರೆದುಕೊಂಡು ಬಂದ. ಇರಲಿ, ನೀವಿನ್ನೂ ರಾವಸಾಹೇಬರ ಮಗಳಿಗೆ ಕಲಿಸಲು ಹೋಗುವಿರಷ್ಟೇ!"

ಕಾಳೆಯ ಮಾತಿನ ಒಲವು ತಿಳಿಯಲಿಲ್ಲ. ಆತನು ಸರಳವಾಗಿ,

"ಸದ್ಯ ಎರಡುದಿನ ಹೋಗಲಿಲ್ಲ. ಅಷ್ಟೇ! ಆ 'ಮಧುಬಿಂದು' ನಿನಗೆ ದೊರೆತಿತಲ್ಲವೆ?"

"ನಿನ್ನೆ ಮಧ್ಯಾಹ್ನದಲ್ಲಿಯೇ ಸಿಕ್ಕಿತು."

ಸುಧಾಕರನು ಎಂದಿನಂತೆ ಮನಬಿಚ್ಚಿ ಮಾತನಾಡುವದಿಲ್ಲವೆಂದು ಕಾಳಿಗೆ ಅನಿಸಿತು. ತಾನು ಸರದಾರರ ಗೃಹದಲ್ಲಿ ನೋಡಿದ ಹುಡುಗಿ ವಾರುಣಿಯೇ ಎಂದು ಸುಧಾಕರನಿಗೆ ತಿಳಿಸಬೇಕೆಂದು ಸಾವಿರ ಸಾರೆ ಮನಸ್ಸಿನಲ್ಲಿ ಬಂದರೂ ಹೇಳುವ ಧೈರ್ಯವಾಗಲಿಲ್ಲ. 'ಹೇಗಾದರೂ ಅವಕಾಶಕ್ಕಾಗಿಯೇ ಬಂದಿದ್ದೇನೆ. ನಾಳೆ ಬೆಳಿಗ್ಗೆ ಎತ್ತಿದರಾಯಿತು' ಎಂದು ಮನಸ್ಸಿಗೆ ಸಮಾಧಾನ ಹೇಳಿ ಸುಮ್ಮನಿದ್ದುಬಿಟ್ಟ.

"ಕಾಳೀ, ಆಗಲೇ ನಿನಗೊಂದು ಪತ್ರ ಬರೆದಿಟ್ಟಿದ್ದೆ. ಮೇಜಿನ ಮೇಲೆಯೇ ಇದೆ. ನಾನೇ ಓದಿ ಹೇಳುತ್ತಿದ್ದೆ. ಆದರೆ ಅಮ್ಮನ ಸಂಗಡ ಗುಡಿಗೆ ಹೋಗಿ ಬರಬೇಕಾಗಿದೆ. ನಿನಗೆ ದಣುವಾಗಿರಬೇಕು. ಮಲಗಿಕೋ" ಎಂದು ಊಟ ಮುಗಿದೊಡನೆಯೇ ನುಡಿದ.

ಹೊರಗ್ಗೆ ಹಿಟ್ಟು ಚಲ್ಲಿದಂತೆ ಬೆಳದಿಂಗಳು ಬಿದ್ದಿತ್ತು. ಮರಗಳು ನರ್ತಿಸುತ್ತಿದ್ದವು. ಹವೆಯು ಹಾಡುತ್ತಿತ್ತು. ಸುತ್ತುಮುತ್ತಲೂ ಸಂತಸವು ಪಸರಿಸಿಕೊಂಡಿತ್ತು. ಇಂತಹ ರಮ್ಯ ಸಮಯದಲ್ಲಿ ಸುಧಾಕರನು ತನ್ನನ್ನು ಕರೆಯದೆ ಹೋದುದಕ್ಕಾಗಿ ಕಾಳಿಗೆ ಕೆಡುಕೆನಿಸಿತು. ಸುಧಾಕರನ ಮೋರೆಯಲ್ಲಿ ಎಂದಿನಂತೆ ಉಲ್ಹಾಸವಿರದ್ದರಿಂದ ಜೊತೆಗೆ ಬರುವೆನೆಂದು ಹಟ ಹಿಡಿಯಲು ಕಾಳಿಗೆ ಶಕ್ಯವಾಗಲಿಲ್ಲ. ಸುಧಾಕರ, ಜಾನಕಮ್ಮ ಹೊರಟು ಹೋದ ಮೇಲೆ ಕಾಳಿಯು ಮೇಜಿನ ಮೇಲಿನ ಒಂದೆರಡು ಪುಸ್ತಕ ತೆಗೆದುಕೊಂಡು ಓದುವ ಪ್ರಯತ್ನ ನಡಿಸಿದ. ಆದರೆ ಅಸ್ವಸ್ಥ ಚಿತ್ತಕ್ಕೆ ವಾಚನವು ರುಚಿಸುವದೇ? ಆ ಮೇಲೆ ಸುಧಾಕರನು ಬರೆದಿಟ್ಟಿದ್ದೇನೆಂದು ಹೇಳಿದ ಪತ್ರದ ನೆನಪಾಗಿ ಮೇಜಿನ ಮೇಲಿದ್ದ ಪತ್ರವನ್ನು ತೆಗೆದು ಓದಹತ್ತಿದನು.

ಜಯಗಾಂವ

೩೧-೮-೧೯೨೮

ನಮಸ್ಕಾರ. ಇಂದು ಸಾಲೆಯಿಂದ ಬಂದೊಡನೆಯೇ ಈ ಪತ್ರ ಬರೆಯಲು ಮೊದಲು ಮಾಡಿದ್ದೇನೆ. ಪ್ರಚಲಿತ ಶಿಕ್ಷಣವೆಂಬ ಕಾಂಚನ ಮೃಗದ ನಿಜವಾದ ರಾಕ್ಷಸೀ ರೂಪವು ಇಂದು ನನ್ನ ದೃಷ್ಟಿಗೆ ಬಿದ್ದಿತು. ಜಯಗಾಂವದ ಸಾಲೆಯಲ್ಲಿದ್ದರೆ ನಾನು ಎಲ್ಲರಂತೆ ಹೊಟ್ಟೆ ತುಂಬಿ ಕೊಳ್ಳಬಹುದೇ ಹೊರತು ನನ್ನ ಧ್ಯೇಯ ಸಿದ್ಧಿಯಾಗದು. ಪ್ರಿಯಗೆಳೆಯಾ, ಗೇಣುದ್ದ ಹೊಟ್ಟೆ ತುಂಬಿಕೊಳ್ಳುವುದಕ್ಕಾಗಿಯೇ ನನ್ನ ಬುದ್ಧಿ, ಭಾವನೆಯನ್ನೆಲ್ಲ ವೆಚ್ಚ ಮಾಡಲೇ? ಜಗತ್ತಿನಲ್ಲಿ ಹೊಟ್ಟೆಯನ್ನು ಯಾರು ತುಂಬಿಕೊಳ್ಳುವದಿಲ್ಲ? ಕಾಗೆ ನಾಯಿಗಳು ಸಹ ಉಪವಾಸ ಸಾಯುವದಿಲ್ಲ. ಒಂದು ಕಾಗೆಗೆ ವಾಯಸಬಲಿ ಸಿಗುತ್ತಿರಬಹುದು, ಇನ್ನೊಂದಕ್ಕೆ ಎಂಜಲದಲ್ಲಿಯ ಅಗುಳು ಹೆಕ್ಕಿ ತಿನ್ನಬೇಕಾಗಬಹುದು. ಅಷ್ಟೇ ವ್ಯತ್ಯಾಸ. ಅಲ್ಲವೇ?

ನಮಗೋಸ್ಕರ ತಮ್ಮ ರಕ್ತವನ್ನು ಚೆಲ್ಲುವ ಸಹಸ್ರಾರು ಮಂದಿ ದಾರಿದ್ರ್ಯದ ಬೇಗೆಯಲ್ಲಿ ಬೆಂದು ಅಜ್ಞಾನದಲ್ಲಿ ತೊಳಲಾಡುತ್ತ ಬಿದ್ದಿರುವಾಗ ನಮ್ಮಂತಹ ತರುಣರು ತೋಳಿಗೆಗೆ ತುಪ್ಪ ಸವರುವುದರಲ್ಲಿಯೇ ದಿನದ ಇಪ್ಪತ್ತಾಲ್ಕು ತಾಸು ವೆಚ್ಚ ಮಾಡುತ್ತಿರುವುದು ಲಜ್ಜಾಸ್ಪದವಲ್ಲವೇ? ನನಗೆ ಹಣಗಳಿಸುವದೊಂದೇ ಧ್ಯೇಯವಾಗಿದ್ದರೆ- ಬಡ ದೇಶಬಂಧವರು ಗುಡಿಸಲಲ್ಲಿ ಹೊದೆಯಲು ಚಿಂದಿಯಿಲ್ಲದೆ ನಡುಗುತ್ತಿರುವಾಗ ನಾನು ಕಾಶ್ಮೀರಿಶಾಲು ಹೊದ್ದು ಬಂಗ್ಲೆಯಲ್ಲಿ ಬೆಚ್ಚಗೆ ಬೀಳುವದೇ ಸುಖಕರವೆಂದು ಭಾವಿಸಿದ್ದರೆ- ಕೋಟ್ಯವಧಿ ಬಾಂಧವರು ಅಜ್ಞಾನ ಹಾಗೂ ದುಷ್ಕಾಳದ ಕಿಚ್ಚಿನಿಂದ ಸುಟ್ಟು ಬೂದಿಯಾಗುತ್ತಿರುವಾಗ ಸಿರಿವಂತಿಕೆಯ ಕಾರಂಜಿಯ ಜಲತುಷಾರಗಳನ್ನು ನೋಡುತ್ತ ಕುಳಿತುಕೊಳ್ಳುವುದರಲ್ಲಿ ಧನ್ಯತೆಯೆನಿಸುತ್ತಿದ್ದರೆ- ಹೊಟ್ಟೆತುಂಬ ಹಿಟ್ಟಿಲ್ಲದೆ, ಹೊದೆಯಲು ಬಟ್ಟೆಯಿಲ್ಲದೆ, ನಿರಕ್ಷರತೆಯ ಮೂಲಕ ಆನಂದದಾಯಕ ವಾಙ್ಮಯವನ್ನು ಓದಲಿಕ್ಕಾಗದೆ ಬನ್ನ ಬಡುವವರು ಸುತ್ತುಮುತ್ತಲೂ

ಹರಡಿರುವಾಗ ಸ್ವತಃ ನನ್ನ ಕೀರ್ತಿಯನ್ನೂ ಹೆಂಡತಿಯ ಆಭರಣವನ್ನೂ, ಬೇಂಕಬೂಕಿನಲ್ಲಿಯ ಧನವನ್ನೂ ನೋಡಿ ಸಮಾಧಾನ ಪಡುವಷ್ಟು ನನ್ನ ಹೃದಯ ಸತ್ತು ಹೋಗಿದ್ದರೆ- ನಾನು ಎಂ. ಎ. ಆಗದೆ ಎಲ್.ಎಲ್.ಬಿ. ಆಗುತ್ತಿದ್ದೆ. ಹಣ ಗಳಿಸುವುದಕ್ಕೆ ಜಗತ್ತಿನಲ್ಲಿ ಅನೇಕ ದಾರಿಗಳಿವೆ. ಆದರೆ ದೇಶ ಬಾಂಧವರ ಸೇವೆಗೆ ಕೆಲವೇ ಮಾರ್ಗಗಳಿದ್ದು ಅವರಲ್ಲಿ ಶಿಕ್ಷಣವೆಂದರೆ ರಾಜಮಾರ್ಗವೆಂದು ನನ್ನ ತಿಳುವಳಿಕೆಯಿತ್ತು

ಜಯಗಾಂವದಲ್ಲಿ ಈ ರಾಜಮಾರ್ಗದ ಮೇಲೆ ನಡೆಯ ಹತ್ತಲು ನನಗೆ ಅದರ ಮೇಲಿನ ಹೊಂಡ ಮತ್ತು ಪಸರಿಸಿದ್ದ ಮುಳ್ಳು ಕಾಣಹತ್ತಿದವು. ದೇಶೋನ್ನತಿಯ ಈ ಮಾರ್ಗವು ಪೂರಾ ಕೆಟ್ಟು ಹೋಗಿರುವುದರಿಂದ ಅದರ ಮೇಲೆ ರಾಷ್ಟ್ರಹಿತದ ಪ್ರಗತಿಯು ಇರಿವೆಯ ಗತಿಯಿಂದ ಆಗುವದೂ ಸಾಧ್ಯವಿಲ್ಲ. ಪ್ರತಿವರ್ಷ, ಸಾಲೆ ಕಾಲೇಜುಗಳು ತೆರೆಯಲ್ಪಡುವದನ್ನು ಕಂಡು ಸಂತೋಷವಾಗುತ್ತಿದೆಯಾದರೂ, ಅವುಗಳಿಂದ ಹೊರಬೀಳುವ ತರುಣರಿಂದ ದೇಶವು ಸಂಪನ್ನವಾಗುವ ಬದಲು ದರಿದ್ರವಾಗುತ್ತ ನಡೆದದ್ದನ್ನು ಕಂಡು ಚಿತ್ತ ವ್ಯಾಕುಲವಾಗುತ್ತಿದೆ.

ಔಷಧದಿಂದ ರೋಗ ಗುಣವಾದೀತೆಂದು ನಂಬಲಾಗಿತ್ತು. ಆದರೆ ರೋಗಿಯೇ ಸಾಯುವ ಪರಿಸ್ಥಿತಿಯಾಯಿತು. ಹೀಗೇಕೆ? ಇದನ್ನು ನಾವು ಕಣ್ಣುತೆರೆದು ಸ್ಥಿರಬುದ್ಧಿಯಿಂದಲೂ, ಉದಾರ ಹೃದಯದಿಂದಲೂ ಪರೀಕ್ಷಿಸಬೇಡವೇ? ಕಳೆದ ಹದಿನೈದು ದಿನಗಳಲ್ಲಿ ನಾನು ಅನೇಕ ಹೈಸ್ಕೂಲುಗಳ ವಾರ್ಷಿಕ ವರದಿಯನ್ನು ನೋಡಿದೆ. ಎಲ್ಲ ಸಂಸ್ಥೆಗಳೂ ತಮ್ಮ ಪ್ರಗತಿಯಾಗಿದೆಯೆಂದು ಬರೆದಿವೆ. ನಮ್ಮ ಜಯಗಾಂವ ಸಾಲೆಯೂ ತನ್ನ ಪ್ರಗತಿಯಾಗಿದೆಯೆಂದು ಒಪ್ಪಿಕೊಂಡಿದೆ. ಆದರೆ ನನಗೆ ಮಾತ್ರ ಸ್ವಾನುಭವದಿಂದ ಹಾಗೆನಿಸುವದಿಲ್ಲ. ಸದ್ಯದ ಶಿಕ್ಷಣದಿಂದ ಮನುಷ್ಯನ ಆವಶ್ಯಕತೆಯೇನೋ ಬೆಳೆಯುತ್ತಿದೆ. ಆದರೆ ಅದನ್ನು ಪೂರೈಸುವ ದಾರಿ ಮಾತ್ರ ಗೊತ್ತಾಗುವದಿಲ್ಲ. ಪ್ರಚಲಿತ ಶಿಕ್ಷಣವು ರಾಷ್ಟ್ರೀಯ ಸಂಪತ್ತಿನ ಬುಡವನ್ನೇ ಅಲ್ಲಾಡಿಸಿಬಿಟ್ಟಿದೆ. ಹಿಂದುಳಿದ ವರ್ಗದಲ್ಲಿ ಶಿಕ್ಷಣ ಪ್ರಸಾರವಾಗಿದೆಯೆಂದು ಸುಧಾರಣಾವಾದಿಗಳಿಗೆ ಸಂತೋಷವಾಗುತ್ತಿದೆ. ಆದರೆ ಈ ಶಿಕ್ಷಣ ಪಡೆದ ಹಿಂದುಳಿದವರು [illegible]

ಶ್ರಮಕ್ಕೆ ನಾಚಹತ್ತಿದ್ದಾರೆ. ಒಕ್ಕಲಿಗ, ಕೂಲಿಕಾರ, ಹಮಾಲಿ, ಗಾಡಿಕಾರ ಮೊದಲಾದ ಜನರ ಕಲಿತ ಮಕ್ಕಳು ನೌಕರಿ ಸಿಗದಿದ್ದರೂ ಪರಂಪರಾಗತ ಧಂದೆ ಮಾಡಲು ಸಿದ್ಧರಿರುವದಿಲ್ಲ. ಯಾರೋ ಒಗೆದ ಚೂರು ರೊಟ್ಟಿಗೆ ನೂರಾಎಂಟು ನಾಯಿಗಳು ಕಚ್ಚಾಡುವಂತೆ ನೌಕರಿಯ ಸ್ಥಿತಿಯಾಗಿದೆ. ಪಾರತಂತ್ರ್ಯದ ಮೂಲಕ ಹೊಸ ಉದ್ಯೋಗ ಧಂದೆ ಅಸ್ತಿತ್ವದಲ್ಲಿ ಬರಲಾರದೆಂಬುದು ನಿಜ. ಆದರೆ ಬಂದ ಪರಿಸ್ಥಿತಿಯನ್ನು ಎದುರಿಸದೆ ಸದ್ಯದ ಸುಶಿಕ್ಷಿತ ಜನರು ಅದರ ಕಡೆಗೆ ಬೆನ್ನು ತಿರುವಿ ನೌಕರಿಯ ಜಪಮಾಲೆ ಹಿಡಿದು ಜಪಮಾಡುತ್ತ ದಾರಿದ್ರ್ಯದಲ್ಲಿ ಕಾಲಹರಣ ಮಾಡುತ್ತಿದ್ದಾರೆ. ಈ ಉದ್ಯೋಗ ಕೀಳು, ಆ ಉದ್ಯೋಗ ಮೇಲು ಎಂಬ ಭಾವನೆ ವಿದ್ಯಾರ್ಥಿಗಳಲ್ಲಿ ತೊಲಗಬೇಕಾದರೆ ವಿದ್ಯಾರ್ಥಿಗಳಿಗೆ ಚಿಕ್ಕಂದಿನಿಂದಲೇ ಯಾವುದಾದರೊಂದು ಕೆಲಸ ಮಾಡುವ ಸ್ಫೂರ್ತಿ ಬೀಳಬೇಕು. ಇಂದಿನ ಕಾಲೇಜು ವಿದ್ಯಾರ್ಥಿಗಳನ್ನು ನೋಡಿದರೆ ಇನ್ನು ಕೆಲವು ದಿನಗಳಲ್ಲಿ ಕ್ಲಾಸಿಗೆ ಪುಸ್ತಕ ಹಿಡಿದುಕೊಂಡು ಹೋಗುವುದು ಸಹ ಅವರಿಗೆ ಕೀಳು ಕೆಲಸವೆಂದು ಅನಿಸುವಂತೆ ತೋರುತ್ತಿದೆ. ಚಿಕ್ಕಂದಿನಲ್ಲಿಯೇ ಸಾದಾತನದ ಕಲ್ಪನೆ ಬಾರದಿದ್ದರೆ ಮುಂದೆ ಬರುವುದು ಸಾಧ್ಯವೇ?

ಸಾದಾತನವಿಲ್ಲದೆ, ಸಾರ್ಥತ್ಯಾಗವಿರದು. ಸ್ವಾರ್ಥತ್ಯಾಗವಿರದೆ ಸಮಾಜಸೇವೆ ಘಟಿಸದು. ಸಾದಾತನದ ಜೊತೆಗೆ ಹೃದಯದ ಉದಾರತೆಯೂ ಬೆಳೆಯ ಬೇಕು. ಕಾಲೇಜಿನಲ್ಲಿರುವಾಗ ಜಮೀನದಾರರ ಮಕ್ಕಳು 'ಶಾ' ನನ್ನು ಓದುತ್ತಾರೆ. ಆದರೆ ಬಿಡುವಿನಲ್ಲಿ ಹಳ್ಳಿಯ ಮನೆಗೆ ಬಂದಾಗ, ತಮಗೋಸ್ಕರ ಹನ್ನೆರಡೂ ತಿಂಗಳು ಮೈಮುರಿ ದುಡಿಯುವ ಒಕ್ಕಲಿಗನ ಕಡೆಗೆ ತಿರುಗಿ ಸಹ ನೋಡುವದಿಲ್ಲ. ಸಹಾನುಭೂತಿಯೆಂಬುದು ಆಕಾಶದಿಂದ ಬೀಳುವ ವಸ್ತುವಲ್ಲ ಅಭ್ಯಾಸದಿಂದಲೇ ಬರಬೇಕಾದುದು. ಸದ್ಯದ ಶಿಕ್ಷಣದಿಂದ ನಮ್ಮ ವಿದ್ಯಾರ್ಥಿಗಳ ಹೃದಯದಲ್ಲಿ ಸಹಾನುಭೂತಿ ಮೊಳೆಯುವಂತಿಲ್ಲ. ವ್ಯವಹಾರಕ್ಕೂ ಇಂದಿನ ಶಿಕ್ಷಣಕ್ಕೂ ಎಳ್ಳಷ್ಟೂ ಸಂಬಂಧವಿಲ್ಲ. ಕ್ಲಾಸಿನಲ್ಲಿ ರೋಮಿಯೋ ಜ್ಯುಲಿಯೆಟ್ಟರ ಪ್ರೇಮವನ್ನೋದಿ ಕಣ್ಣೀರಿಳಿಸುವ ತರುಣ ವಿದ್ಯಾರ್ಥಿ ತನ್ನ ಮದುವೆಯ

ಹೊತ್ತಿಗೆ ವರದಕ್ಷಿಣೆಯು ಸಾಕಷ್ಟಿಲ್ಲದಿದ್ದರೆ ಸುಂದರ ಹಾಗೂ ಗುಣವತಿಯಾದ ಹುಡುಗಿಯನ್ನು ಬಿಟ್ಟುಬಿಡಲಿಕ್ಕೂ ಹಿಂದುಮುಂದು ನೋಡುವದಿಲ್ಲ. ಇತಿಹಾಸದಲ್ಲಿ ಸ್ವಾರ್ಥತ್ಯಾಗದ ಹೊರತು ಸ್ವಾತಂತ್ರ್ಯವಿಲ್ಲವೆಂಬುದನ್ನು ಕಂಠಪಾಠಮಾಡಿದ್ದರೂ ತಮ್ಮ ದೇಶದ ಪಾರತಂತ್ರ್ಯ ಶೃಂಖಲೆಯನ್ನು ಕಡಿದೊಗೆಯುವದರಲ್ಲಿ ಈ ಗಿಳಿಪಾಠದ ಮಂದಿಯಿಂದೇನೂ ಪ್ರಯೋಜನವಾಗಲಿಲ್ಲ.

ಗೆಳೆಯಾ, ಬಹಳ ಮಾತಿನಿಂದೇನು ಪ್ರಯೋಜನ? ಈ ಸ್ಥಿತಿ ತಿಳಿದವರು ಅದನ್ನು ಬದಲಿಸಲು ಯತ್ನಿಸಬೇಕು. ಕಲ್ಪವೃಕ್ಷದಂತೆ ಧ್ಯೇಯವೂ ಸಹ ಕಲ್ಪನಾಸೃಷ್ಟಿಯೊಳಗಿನ ಕನಸೆಂದು ಅನೇಕರು ಹೇಳುತ್ತಾರೆ. ಆದರೆ ನಿಜವಾದ ಸಹೃದಯನು ಹಾಗೆಂದೂ ಹೇಳಲಾರನು. ಧ್ಯೇಯವಿಲ್ಲದ ಮಾನವೀ ಜೀವನವೆಂದರೆ ಸೂರ್ಯನಿಲ್ಲದ ಜಗತ್ತಿನಂತೆ. ಸೂರ್ಯನಂತೆ ಧ್ಯೇಯವು ನಮ್ಮ ಕಣ್ಣಿಗೆ ಕಾಣಿಸುವದಿಲ್ಲವೆಂಬುದು ನಿಜ. ಆದರೆ ಧ್ಯೇಯದ ಬೆಳಕಿನಲ್ಲಿ ಉನ್ನತಿಯ ಮಾರ್ಗಕ್ರಮಿಸಿ, ಧ್ಯೇಯದ ಉಷ್ಣತೆಯಿಂದ ತನ್ನ ಕಾರ್ಯವೃಕ್ಷವನ್ನು ಬೆಳಿಸುವದೇನೂ ಅಸಾಧ್ಯವಾದ ಮಾತಲ್ಲ. ಮಾಡಿದ ಹೊರತು ಈ ಜಗತ್ತಿನಲ್ಲಿ ಏನೇನೂ ಸಾಧಿಸದು.

ಹೀಗೆಲ್ಲ ಬರೆದುದರಿಂದ ಒಮ್ಮೆಲೇ ಜಯಗಾಂವದ ಸಾಲೆ ಬಿಡುವೆನೆಂದು ಭಾವಿಸಬೇಡ. ಆದರೂ ಕೊನೆಯ ನಿರ್ಣಯ ಇಂದು ಮಧ್ಯರಾತ್ರಿಯೊಳಗೆ ಆಗತಕ್ಕದ್ದಿದೆ. ನಿರ್ಣಯವಾದ ಮೇಲೆ ಮನಸ್ಸು ಸ್ಥಿರವಾಗಿದ್ದರೆ ಇನ್ನೊಂದು ಪತ್ರ ಬರೆಯುವೆನು. ನಿನಗೆ ತಾಯಿಯ ಆಶೀರ್ವಾದ.

ನಿನ್ನವನೇ
ಸುಧಾಕರ.

ಆ ಪತ್ರವನ್ನೋದಿ ಕೆಳಗಿಡುವಷ್ಟರಲ್ಲಿ ಇನ್ನೊಂದು ಗುಲಾಬಿ ಬಣ್ಣದ ಲಖೋಟೆ ಕಾಣಿಸಿತು. ಹೆರವರ ಪತ್ರ ಓದಬಾರದೆಂದು ಮೊದಲು ನಿಶ್ಚಯಿಸಿದರೂ ಇಂದು ಮಧ್ಯರಾತ್ರಿಯೊಳಗೆ ಕೊನೆಯ ನಿರ್ಣಯವಾಗತಕ್ಕದ್ದಿದೆಯೆಂದು ಸುಧಾಕರನ ಪತ್ರದಲ್ಲಿದ್ದುದರಿಂದ ಅದನ್ನು ತೆಗೆದು ಓದಿಯೇ ಬಿಟ್ಟೆನು.

ಆದು ವಾರುಣಿಯ ಪತ್ರವಾಗಿದ್ದಿತು. ಆದರೆ ಅದರಲ್ಲಿಯ ಭಾಷೆ ಪ್ರೇಮ ಪತ್ರದ ದೃಷ್ಟಿಯಿಂದ ಸಂದಿಗ್ಧವಾಗಿದ್ದಿತು. ಸುಧಾಕರನು ತನ್ನನ್ನು ಕರೆದುಕೊಂಡು ಹೋಗದೇ ಇದ್ದುದು ಇದೇ ಕಾರಣವಿರಬೇಕೆಂದು ಕಾಳೆಯು ಊಹಿಸಿದನು. "ಕರೆದುಕೊಂಡು ಹೋದ ತಾಯಿಯನ್ನು ಎಲ್ಲಿಯಾದರೊಂದು ದೇವಸ್ಥಾನದಲ್ಲಿ ಬಿಟ್ಟು ಈ ತರುಣಿಯು ನಿರ್ದೇಶ ಪಡಿಸಿದ ಸ್ಥಳಕ್ಕೆ ಸುಧಾಕರನು ಹೋಗಿರುವನು. ವಾರುಣಿಯು ಸುಧಾಕರನನ್ನು ಪ್ರೀತಿಸುವುದು ನಿಜವಾದರೆ, ನಾನು ಬಂದ ಕೆಲಸ ನಿರರ್ಥಕವೇ ಸರಿ. ಆದರೂ ಪರಾಂಬರಿಸಿ ನೋಡುವುದು ಹಿತವೆ"ಂದು ಯೋಚಿಸಿ ಕೋಟು ಟೊಪ್ಪಿಗೆ ಹಾಕಿ ಹೊರಬಿದ್ದನು.

ಕಾಳೆಯು ಹೋದ ಹದಿನೈದು ನಿಮಿಷಗಳಲ್ಲಿ ಸುಧೆಯು ಸುಧಾಕರನ ಮನೆಗೆ ಬಂದಳು. ದಾದಾಸಾಹೇಬರ ಕೂಸಿನ ಪ್ರಕೃತಿಯಲ್ಲಿ ಯಾವ ಸುಧಾರಣೆಯೂ ಇದ್ದಿಲ್ಲ. ಶಾಸ್ತ್ರಿಗಳು ಮತ್ತು ಪುಂಡಂಭಟ್ಟರು ಸುಧೆಯನ್ನು ಮಡಿಮಾಡಿದ ಹೊರತು ಕೂಸಿನ ರೋಗ ಗುಣವಾಗುವದಿಲ್ಲೆಂದು ಪರಿಹಾರ ಹೇಳಿದ್ದರಿಂದ ಸುಧೆಯ ಅತ್ತೆ ಮತ್ತು ಅತ್ತಿಗೆಯರು ವಿಲಂಬವಿಲ್ಲದೆ ಸುಧೆಯನ್ನು ಮಡಿಮಾಡಿಸುವದಕ್ಕೆ ನಿಶ್ಚಯಿಸಿದ್ದರು.

ಸುಧೆಯು ತನ್ನ ಅಣ್ಣ ಹಾಗೂ ಮೈದುನರು ಸುಶಿಕ್ಷಿತರಿದ್ದುದರಿಂದ ಮಡಿಮಾಡುವ ವಿಧಾನಕ್ಕೆ ಒಪ್ಪಲಿಕ್ಕಿಲ್ಲವೆಂದು ಧೈರ್ಯದಿಂದಿದ್ದಳು. ಆದರೆ ಅದೂ ಅವರ ಮಾತಿನಿಂದ ನಿರಾಶೆಯಾಗಿ ಬಿಟ್ಟಿತು.

ಮಧುಕರನು ದಾದಾಸಾಹೇಬರನ್ನು ಕರೆದುಕೊಂಡು ಸುಧಾಕರನು ವಾರುಣಿಯ ದರ್ಶನಕ್ಕೆ ಬರುವ ಸಮಯ ಸಾಧಿಸಲು ಹೊರಟು ಹೋದುದರಿಂದ ಸುಧೆಯ ದಾರಿ ನಿಷ್ಕಂಟಕವಾಯಿತು. ಬರುವಾಗ ಮನೆಯ ಒಳಗೊಮ್ಮೆ ದೃಷ್ಟಿಹಾಕಿದಳು; ಇನ್ನೊಮ್ಮೆ ಹೊರಗೆ ನೋಡಿದಳು. ಒಳಗೆ ರೌರವನರಕವಿತ್ತು. ಬಲಾತ್ಕಾರ, ಅಸಹನೆ, ಕೇಶವಪನದಂತಹ ಅತ್ಯಾಚಾರದ ಹೊರತು ಇನ್ನೇನಿರಲಿಲ್ಲ. ಅವಳು ಹುಟ್ಟಿದ ಮತ್ತು ಅವಳು ಹೋದ ಕುಲವೆರಡೂ ನಾಳೆ ಅವಳ ವಿಡಂಬನೆಯ ನಿರ್ಣಯಕ್ಕೆ ಶಾಂತರೀತಿಯಿಂದ ಮುದ್ರೆಯನ್ನೊತ್ತುತ್ತಿತ್ತು. ಹೊರಗೆ

ಅವಳಿಗೆ ಆಪ್ತೇಷ್ಟರಿದ್ದಿಲ್ಲ; ಜಾತಿಪಾತಿಇದ್ದಿಲ್ಲ. ಆದರೂ ಅಲ್ಲಿಯೇ ಅವಳ ಸ್ವರ್ಗವಿತ್ತು. ಸ್ವರ್ಗ! ಸುಧಾಕರ ಕೂಗಳತೆಯ ಅಂತರದಲ್ಲಿ ಸ್ವರ್ಗವಿರುವಾಗ ಅಮರಣ ನರಕದೊಳಗೆ ಕೊಳೆಯುತ್ತ ಬೀಳುವವರಾರು? ದೇವರು ಎದುರಿನಲ್ಲಿ ನಿಂತಿರುವಾಗ ಅಸ್ಥಿರ ದೇಹಕ್ಕೆ ಮೋಹಗೊಳುವವರಾರು? ಸುಧೆಯು ಮೆಲ್ಲನೆ ಬಾಗಿಲೆಳೆದು ಹೊರ ಬಿದ್ದಳು.

ಸುಧಾಕರನ ಮನೆಯಲ್ಲಿ ಯಾರೂ ಇಲ್ಲದ್ದನ್ನು ಕಂಡು ಅವಳ ಎದೆಯು ಧಸಲ್ಲೆಂದಿತು. ಸುಧಾಕರನು ವಾರುಣಿಯ ಬಳಿ ಹೋಗಿರಬೇಕೆಂಬ ವಿಚಾರ ಬಂದದ್ದೇ ತಡ. ಆಕೆಯ ಹೃದಯಕ್ಕೆ ಭೂಕಂಪದಿಂದ ಧಕ್ಕೆ ತಗುಲಿ, ತಲೆಯೊಳಗೆ ಜ್ವಾಲಾಮುಖಿಯು ಉರಿಯುತ್ತಿದ್ದಂತೆ ಭಾಸವಾಯಿತು. ಆದರೆ ಮನೆಯಲ್ಲಿ ಜಾನಕಮ್ಮನವರೂ ಇಲ್ಲದ್ದನ್ನು ಕಂಡು ಇಬ್ಬರೂ ಸ್ವಾಮಿಯವರ ಬಳಿಗೆ ಹೋಗಿರಬಹುದೆಂದು ಅನಿಸಿದ್ದರಿಂದ ಸುಧಾಕರನ ಬಗ್ಗೆ ಇಲ್ಲದ ಕಲ್ಪನೆ ಮಾಡಿದುದಕ್ಕೆ ಅವಳಿಗೆ ಖೇದವಾಯಿತು. ಅಲ್ಲಿ ತನ್ನ ಭವಿತವ್ಯದ ನಿರ್ಣಯವಾಗಲಿರುವುದರಿಂದ ಆಕೆ ಶಿವಮಂದಿರದ ದಾರಿ ಹಿಡಿದಳು. ಸುಧಾಕರನು ಆಕೆಯ ಹೃದಯವನ್ನು ಅಪ್ಪಿಕೊಳ್ಳಲು ಒಲ್ಲೆಂದರೆ ಸಾಗರವಾದರೂ ಸಿದ್ಧವಾಗಿಯೇ ಇತ್ತು.

## ಪ್ರಕರಣ ೩೦.

ಸುಧೆಯ ಪುನರ್ವಿವಾಹದ ಬಗ್ಗೆ ಜಾನಕಮ್ಮನವರ ಮನಒಲಿಸುವದಕ್ಕೆ ಒಪ್ಪಿದಂದಿನಿಂದ ಸದಾನಂದ ಸ್ವಾಮಿಯವರಿಗೆ ನಿದ್ದೆ ಸಹ ಬಾರದಾಯಿತು ವಾಲಾವಲಿಯಲ್ಲಿ ಸುಧೆಗೆ "ಸೌಭಾಗ್ಯವತೀ ಭವ" ಎಂದು ಮರೆವೆಯಿಂದ ಆಶೀರ್ವದಿಸಿದ್ದರು. ಜಯಗಾಂವದಲ್ಲಿ ಬಂದ ಮಾರನೇ ದಿನವೇ ಸುಧಾಕರನೊಡನೆ ಸುಧೆಯು ಯಮೂಳ ಮನೆಗೆ ಹೋದದ್ದು ಗೊತ್ತಾಯಿತು. ಒಂದೆರಡು ದಿನದಲ್ಲಿಯೇ ಅವರಿಬ್ಬರೂ ಶಿವಮಂದಿರದೊಳಗೆ ಕಂಡರು. ಅಲ್ಲದೆ ಸುಧಾಕರನೊಡನೆ ಮಾತಾಡುವಾಗ ಸುಧೆಯ

ಬಗ್ಗೆ ಆತನಲ್ಲಿ ಯಾವ ಭಾವನೆಯಿದೆಯೆಂಬುದನ್ನು ಕುತೂಹಲದಿಂದ ನೋಡುತ್ತಿದ್ದರು. ಈ ಬುದ್ಧಿವಂತ, ಸ್ವಾರ್ಥತ್ಯಾಗಿ, ಮಾಯಾಳು ಅಂತಃಕರಣದೊಳಗೆ ಸುಧೆಯು ಪ್ರವೇಶಿಸಿರುವಳೆಂದು ಕಂಡು ಹಿಡಿಯಲು ಅವರಿಗೆ ತಡವಾಗಲಿಲ್ಲ. ಬೆಳಗಾಯಿತೋ-ಇಲ್ಲವೋ ಎಂಬುದನ್ನು ತೋರಿಸಲು ದೀಪದ ಅವಶ್ಯಕತೆ ಇಲ್ಲವಾಗುವಂತೆ, ಒಬ್ಬನಿಗೆ ಇನ್ನೊಬ್ಬ ವ್ಯಕ್ತಿಯ ವಿಷಯದಲ್ಲಿ ಅನುರಾಗವಿದೆಯೋ ಇಲ್ಲವೋ ಎಂದು ಕಂಡುಹಿಡಿಯಲು ಅವನೊಡನೆ ಆ ವ್ಯಕ್ತಿಯ ಬಗ್ಗೆ ಸವಿಸ್ತಾರವಾಗಿ ಮಾತನಾಡಬೇಕೆಂದಿಲ್ಲ. ಪ್ರಿಯವ್ಯಕ್ತಿಯ ಉಲ್ಲೇಖವಾದೊಡನೆ ಮುಖಮುದ್ರೆ ಅರುಳುತ್ತದೆ. ಮುಖದ ಮೇಲೆ ಆನಂದ ಲಹರಿಗಳು ಉಕ್ಕುತ್ತವೆ. ನೇತ್ರ ಚಂಚಲಗೊಳ್ಳುತ್ತದೆ. ಸ್ವರದಲ್ಲಿ ಮಾಧುರ್ಯವುತ್ಪನ್ನವಾಗುತ್ತದೆ. ಈ ಅಪ್ರತ್ಯಕ್ಷ ಪುರಾವೆಯ ಜೊತೆಯಲ್ಲಿ ಪ್ರತ್ಯಕ್ಷ ಪ್ರಮಾಣವೂ ಕೂಡಿದ್ದರಿಂದ ಸುಧಾಕರನ ಪ್ರೇಮದ ವಿಷಯದಲ್ಲಿ ತರ್ಕಿಸುವದು ಸ್ವಾಮಿಯವರಿಗೆ ಕಠಿಣವೆನಿಸಲಿಲ್ಲ. ಪ್ರೀತಿಸುವದು ಹೃದಯದ ಧರ್ಮ. ಆದರೆ ಹೃದಯ ನಾಲಗೆಗಳ ಅಂತರ ಹರಿಯುವದು ಮಾತ್ರ ದುಸ್ತರವೆಂದು ಅವರ ಅನುಭವಕ್ಕೆ ಬರಹತ್ತಿತು.

ಸಂಕೋಚ ಮತ್ತು ನಿರಾಶೆಯ ಕತ್ತಲಲ್ಲಿ ಪ್ರೇಮ ಪ್ರಕಟಿಸುವ ಕಾಮುಕತೆ ಸುಧಾಕರನಿಗೆ ಸೇರುತ್ತಿರಲಿಲ್ಲವೆಂದು ಸ್ವಾಮಿಯವರು ಕಂಡುಹಿಡಿದರು. ಶಾಲೆಯಲ್ಲಿಯ ಕಟುಅನುಭವದಿಂದ ಸಾರ್ವಜನಿಕ ಜೀವನದಲ್ಲಿ ಸುಧಾಕರನ ಮನಸ್ಸಿನ ಮೇಲೆ ನಿರಾಶೆಯ ಪರಿಣಾಮವಾಗುವ ಸಂಭವ ಸ್ವಾಮಿಯವರಿಗೆ ಕಂಡುಬರಹತ್ತಿದಂತೆ ಸುಧೆಯ ವಿಷಯದಲ್ಲಿ ಸುಧಾಕರನೊಡನೆ ಮನಬಿಚ್ಚಿ ಮಾತನಾಡುವ ಆವಶ್ಯಕತೆ ಇದೆಯೆಂಬುದು ದೃಢವಾಗಹತ್ತಿತು. ಫಲವು ಎಷ್ಟೇ ಹಣ್ಣಾಗಿದ್ದರೂ ಪಕ್ಷಿಯ ಚುಂಚು ತಗಲಿದ ಹೊರತು ರಸ ಹೊರಬೀಳದು. ಸುಧಾಕರನ ಭಾವನೆಯೂ ಇದೇ ತೆರನಾಗಿತ್ತು. ಸ್ವಾಮಿಯವರು ಪಿತೃಪ್ರೇಮದಿಂದ ಅದನ್ನು ತಿಳಿದು ಅವನ ಸಾಹಸ ಸಫಲವಾಗುವಂತೆ ಪ್ರಯತ್ನಪಡುವ ಅಭಿವಚನವನ್ನಿತ್ತರು.

ಈ ಅಭಿವಚನದಿಂದ ಸುಧಾಕರನಂತೆ ಸ್ವಾಮಿಯವರಿಗೂ ಸುಖವಾಯಿತು. ತನ್ನ ಪಾಪದ ಕಟುಫಲವನ್ನು ನಿರಪರಾಧಿ ಸೊಸೆಯು ಅನುಭವಿಸಬೇಕಾಗಿ ಬಂದಿದೆಯೆಂದು ಭಾಸವಾದೊಡನೆಯೇ ಅವರು ಮನೆ ಬಿಟ್ಟಿದ್ದರು. ಮನೆಯನ್ನು ಬಿಟ್ಟರೂ ಹೃದಯದಿಂದ ದುಃಖವನ್ನು ತೊಲಗಿಸಲಿಕ್ಕಾಗಲಿಲ್ಲ. ಹತ್ತು ವರ್ಷಗಳಾಗಿ ಹೋಗಿದ್ದರೂ ಸುಧೆಯ ಕುಂಕುಮ ಹೀನ ಹಣೆಯನ್ನು ನೋಡಲು ಭಯವೆನಿಸುತ್ತಿತ್ತು. ಆ ಸ್ಥಳದ ತನ್ನ ಪಾಪವು ಮೂರ್ತಿಮಂತವಾಗಿ ಕುಳಿತಿದೆಯೆಂದು ಅನಿಸುತ್ತಿತ್ತು. ಶಿವಮಂದಿರದೊಳಗೆ ಸುಧಾಕರನೊಡನೆ ಸುಧೆಯು ಬಂದಾಗ ಅವರು ಸಂಕೋಚ ಪಟ್ಟುದಕ್ಕೆ ಇದೇ ಕಾರಣವಿತ್ತು. ಸುಧಾ ಮತ್ತು ವಾರುಣಿಯರು ಬಂದಾಗ ಅವರು ಬಲುಕಷ್ಟದಿಂದ ಮನೋನಿಗ್ರಹಮಾಡಿ ಸುಧೆಯ ಕಡೆಗೆ ನೋಡಿದರು. ಆದರೆ ಅವಳಿಗೆ ತನ್ನ ಸುಳಿವು ಹತ್ತಗೊಡಬಾರದೆಂದು ನಿಶ್ಚಯಿಸಿದರು.

ಸುಧಾಕರನೊಡನೆ ಸುಧೆಯ ವಿವಾಹವಾಗುವದು ಶಕ್ಯವಿದೆಯೆಂದು ತಿಳಿದಾಗ ಅವರಿಗೆ ಅತ್ಯಾನಂದವಾಯಿತು. ತನ್ನ ಪಾಪ ತೊಳೆದು ಹೋಗುವ ಸಂಧಿಯೊದಗಿತೆಂದು ಸಂತೋಷಪಟ್ಟರು ಆದರೆ ಸುಧಾಕರನಿಗೆ ಶಕ್ಯವಿದ್ದಷ್ಟು ಸಹಾಯ ಮಾಡುತ್ತೇನೆಂದು ಮಾತುಕೊಟ್ಟ ಮೇಲೆ ಮಾತ್ರ ಅವರ ಮನಸ್ಸು ಸಂದೇಹದಲ್ಲಿ ಬಿದ್ದುಬಿಟ್ಟಿತು. "ತಾಯಿ ನನ್ನ ಮಾತನ್ನು ಮನ್ನಿಸದಿದ್ದರೆ? ಬೆಳೆದ ಕಟ್ಟಿಗೆ ಮುರಿಯುತ್ತದೆಯೇ ಹೊರತು ಬಾಗುವದಿಲ್ಲ. ಜಾನಕಮ್ಮನವರ ಮನಸ್ಸಿನ ಮೇಲೆ ಪಾಪಪುಣ್ಯದ ಪರಂಪರಾಗತ ಕಲ್ಪನೆಯ ಪ್ರಭಾವ ಬಿದ್ದಿರಬಹುದು. ಈ ಕಲ್ಪನೆಗಳನ್ನು ನಿರ್ಮೂಲ ಮಾಡುವ ಸಾಮರ್ಥ್ಯ ನನ್ನ ಮಾತಿನಲ್ಲಿದೆಯೆ? ಮಾತಿನಿಂದ ಹೃದಯದಲ್ಲಿ ಪರಿವರ್ತನೆಯಾಗುವದು ಶಕ್ಯವಿಲ್ಲ. ಗೀತೆಯ ಹದಿನೆಂಟು ಅಧ್ಯಾಯಗಳನ್ನು ಕೇಳಿಯೂ ಅರ್ಜುನನು ಮಡಿದ ಅಭಿಮನ್ಯುವಿಗಾಗಿ ಗಳಗಳನೆ ಕಣ್ಣೀರಿಡಲಿಲ್ಲವೇ? ಆಯುಷ್ಯದ ಗ್ರಂಥವನ್ನು ಶಬ್ದಗಳಿಂದ ರಚಿಸಲಾಗುವದಿಲ್ಲ. ಅದನ್ನು ಹೃದಯದ ರಕ್ತದಲ್ಲಿ ಬುದ್ಧಿಯ ಲೆಕ್ಕಣಿಕೆಯನ್ನದ್ದಿ ಬರೆಯಬೇಕಾಗುತ್ತದೆ"

ಇಂದಲ್ಲ ನಾಳೆ ತಾಯಿಯ ಜೊತೆಗೆ ಸುಧಾಕರನು ಬಂದೇ ತೀರುವನೆಂದು ಗೊತ್ತಿತ್ತು. ಒಣವೇದಾಂತದಿಂದ ಆಕೆಯು ಸಮಾಧಾನ ಪಡದಿದ್ದರೆ ಏನು ಮಾಡಬೇಕೆಂದು ಯೋಚಿಸ ಹತ್ತಿದರು. ಮಧ್ಯರಾತ್ರಿಯಲ್ಲಿ ಸಮುದ್ರದ ಹವೆಯು ಕ್ರೂರ ಪಶುಗಳಂತೆ ಗರ್ಜನೆ ಮಾಡುತ್ತ ಸಿಕ್ಕ ಸಿಕ್ಕಲ್ಲಿಗೆ ಓಡಹತ್ತಲು ಶಿವಮಂದಿರದ ಮೆಟ್ಟಿಲ ಮೇಲೆ ಅವರು ಈ ವಿಷಯದ ಬಗ್ಗೆ ವಿಚಾರ ಮಾಡುತ್ತ ಕುಳಿತುಕೊಳ್ಳುತ್ತಿದ್ದರು. ಒಂದು ನಿಷ್ಪಾಪ ಜೀವಕ್ಕೆ ಸುಖಿಯನ್ನಾಗಿಸುವ ಅಲ್ಪ ಸಂಗತಿಗೆ ಅದೆಷ್ಟು ತೊಂದರೆ ಬರಬೇಕು? ಮನುಷ್ಯರ ರೂಪದಿಂದ ಬರುವ ಸಂಕಟಗಳು ಕಡಿಮೆ ಎನಿಸಿದ್ದರಿಂದಲೋ ಏನೋ ಸಮಾಜವು ದೇವರ ರೂಪದಿಂದ ತೊಂದರೆಗಳನ್ನು ತಂದೊಡ್ಡುತ್ತಿದೆ. ಸುಧೆಯನ್ನು ವೈಧವ್ಯನರಕದಿಂದ ಮುಕ್ತಗೊಳಿಸುವ ಕೆಲಸದಲ್ಲಿ ದೇವರು ನನಗೆ ಸಹಾಯ ನೀಡಬಹುದೇ ಎಂಬ ವಿಚಾರ ಬರಲು ಅವರ ಮೈ ಕಂಪಿಸಹತ್ತುತ್ತಿತ್ತು. ಸಿಡಿಲು ಮಿಂಚುವಂತೆ ಆಕಾಶದ ಪರದೆಯನ್ನು ದೂರಮಾಡಿ ದೇವರು ಒಂದುವೇಳೆ ಪ್ರಕಟವಾಗುತ್ತಿದ್ದರೆ– ಎಲೆಗಳೊಳಗಿಂದ ಇಣಿಕಿ ನೋಡುವ ಮೊಗ್ಗೆಯಂತೆ ಸಮುದ್ರದ ತೆರೆಗಳೊಳಗಿಂದ ಭಗವಾನ್ ಶೇಷಶಾಯಿಯು ಕಂಡುಬರುತ್ತಿದ್ದರೆ— ಗಾಳಿಯ ಸಪ್ಪಳದೊಳಗಿಂದ ಮನುಷ್ಯನಿಗೆ ತಿಳಿಯಬಹುದಾದ ದೇವವಾಣಿ ಒಂದುವೇಳೆ ಹೊರಡಬಹುದಾದರೆ ತನ್ನ ಪ್ರಾಣವನ್ನರ್ಪಿಸಿಯಾದರೂ ಸುಧೆಯ ಪುನರ್ವಿವಾಹದ ಬಗ್ಗೆ ದೇವರ ಸಮ್ಮತಿಯನ್ನು ಸಂಪಾದಿಸಬಹುದೆಂದು ಸ್ವಾಮಿಯವರ ಮನಸ್ಸಿನಲ್ಲಿ ಬರುತ್ತಿತ್ತು. ಆದರೆ ದೇವರು ಈ ಪ್ರಕಾರ ತನ್ನ ಸಹಾಯಕ್ಕೆ ಬರಲಾರನೆಂಬುದು ಲಕ್ಷ್ಯಕ್ಕೆ ಬರಲು ಅವರ ಮನಸ್ಸು ಉದಾಸೀನವಾಗುತ್ತಿತ್ತು.

ಸುಧಾಕರನು ಜಾನಕಮ್ಮನವರನ್ನು ಕರೆದುಕೊಂಡು ಬಂದಾಗ ಸ್ವಾಮಿಯವರ ಮನಸ್ಸು ಹೀಗೆಯೇ ಸಂಸಾರ ಸಾಗರದಲ್ಲಿ ಮುಳುಗೇಳುತ್ತಿತ್ತು. ಅವರನ್ನು ಕಂಡೊಡನೆಯೇ ತಮ್ಮ ಪರೀಕ್ಷೆಯ ಪ್ರಸಂಗ ಬಂತೆಂದು ಕ್ಷಣಹೊತ್ತು ಗಾಬರಿಯಾದರು. ಜಾನಕಮ್ಮನವರು ದೇವರಿಗೂ, ಸ್ವಾಮಿಗಳಿಗೂ ನಮಸ್ಕಾರ ಮಾಡಿದ ಮೇಲೆ ಆ ಮೂವರೂ ದೇವಸ್ಥಾನದ ಮೆಟ್ಟಿಲ ಮೇಲೆ ಬಂದು ಕುಳಿತುಕೊಂಡರು. ಸ್ವಾಮಿಯವರು

ಎಷ್ಟೋ ಹೊತ್ತಿನ ವರೆಗೆ ಬೆಳದಿಂಗಳಿಂದ ಸಿಂಗರಿಸಲ್ಪಟ್ಟ ಆಕಾಶ ಮತ್ತು ಸಮುದ್ರದ ಕಡೆ ನೋಡಿದರು. ಆ ಮೇಲೆ ಧೈರ್ಯ ತಂದು ಸುಧೆಯ ಪ್ರಶ್ನೆಯನ್ನೆತ್ತಿದರು. ಅನೇಕ ಪೌರಾಣಿಕ ಕತೆಗಳನ್ನು ಹೇಳಿ ಸುಧಾ-ಸುಧಾಕರರ ಲಗ್ನದಲ್ಲಿ ಯಾವ ದೋಷವೂ ಇಲ್ಲವೆಂದು ಹೇಳಿದರು. ಅವರಿಗೆ ಗೀತೆಯು ಸಂಪೂರ್ಣವಾಗಿ ಮುಖೋದ್ಗತವಾಗಿತ್ತು. ದಾಸಬೋಧ ಅವರಿಗೆ ಕಂಠಸ್ಥವಾಗಿತ್ತು. ತುಕಾರಾಮರ ಅಭಂಗಗಳು ಕರತಲಾಮಲಕವಾಗಿದ್ದವು. ಅವರ ವಕ್ತೃತ್ವ ಪ್ರವಾಹದಲ್ಲಿ ಜಾನಕಮ್ಮನೇ ಏಕೆ, ಸುಧಾಕರನೂ ಹರಿದು ಹೋದನು. ಸ್ವಾಮಿಯವರು ತಮ್ಮ ಸಂಪೂರ್ಣ ಜ್ಞಾನವನ್ನು ಪ್ರಯೋಗಿಸಿ ಪಾಪದ ಕಲ್ಪನೆಗಳು ಮೇಲಿಂದ ಮೇಲೆ ಬದಲಾಯಿಸುತ್ತಿವೆಯೆಂದು ಮನದಟ್ಟು ಮಾಡಿಕೊಟ್ಟರು.

ಈ ಎಲ್ಲ ಮಾತಿನಿಂದ ಜಾನಕಮ್ಮನಿಗೆ ಕ್ಷಣಹೊತ್ತು ಮಾತ್ರ ಸಮಾಧಾನವಾಗಬಹುದೆಂಬು ಕಂಡುಬಂದದ್ದರಿಂದ ಸ್ವಾಮಿಯವರು ಸುಧಾಕರನಿಗೆ ತುಸು ಆಚೆ ಹೋಗಲು ಹೇಳಿ 'ಅಮ್ಮಾ' ಎಂದರು.

"ತಮ್ಮಂತಹರ ಉಗುರಿನ ಯೋಗ್ಯತೆಯೂ ಇಲ್ಲದ ನನಗೆ ಹೀಗೆಲ್ಲ ಮಾತನಾಡಬಾರದು."

"ಅಮ್ಮಾ, ನನ್ನ ಸಂಗತಿಯೆಲ್ಲ ತಿಳಿದ ಮೇಲೆ ನಾನು ನಿಮಗೇಕೆ ಅಮ್ಮಾ ಎಂದೆನೆಂದು ಗೊತ್ತಾಗಬಹುದು. ನಿಮಗೆ ನನ್ನ ಉಗುರು ಕಾಣುತ್ತಿದೆ; ಕೈ ಕಾಣುತ್ತಿದೆ; ಕಾವಿಬಟ್ಟೆ ಕಾಣುತ್ತಿದೆ. ಆದರೆ ಮನಸ್ಸು ಮಾತ್ರ ಕಾಣುವದಿಲ್ಲ. ಅದನ್ನು ಸರಿಯಾಗಿ ತೋರಿಸುವದು ಬಲು ಕಠಿಣ. ಆದರೆ ಕಳೆದ ಹತ್ತು ವರ್ಷಗಳಿಂದ ನನ್ನ ಮನಸ್ಸು ಪಶ್ಚಾತ್ತಾಪಾಗ್ನಿಯಲ್ಲಿ ಸುಡುತ್ತಾ ಬಂದಿರುವದು."

"ಅಮ್ಮಾ, ಸುಧೆಯ ಎರಡನೆ ಮದುವೆಯು ನಿಮಗೆ ಪಾಪವೆನ್ನಿಸುತ್ತಿದೆ. ದೇವರ ದೃಷ್ಟಿಯಿಂದ ಅದು ಪಾಪವಿರುತ್ತದೆಂದು ನಿಮ್ಮ ಮನವರಿಕೆಯಾದಂತಿದೆ. ಆದರೆ ಇನ್ನೊಬ್ಬರನ್ನು ಸುಖಪಡಿಸುವದೇ ಜಗತ್ತಿನಲ್ಲಿ ಎಲ್ಲಕ್ಕೂ ದೊಡ್ಡ ಪುಣ್ಯ. ಮತ್ತು ಪರಪೀಡನೆಯೇ ಪಾಪ. ಈಗ

ಸುಧಾಕರನು ಸುಧೆಗೆ ಸುಖವನ್ನು ಕೊಡಲು ಸಿದ್ಧನಾಗಿರುವನು. ಅರ್ಥಾತ್ ಪುಣ್ಯ ಮಾಡುತ್ತಿರುವನು. ಅವಳ ಮದುವೆಯಿಂದ ಇನ್ನಾರಿಗೂ ಹಾನಿಯಾಗಲಿಕ್ಕಿಲ್ಲ. ಅವಳ ಅಣ್ಣಾ ಮತ್ತು ಮೈದುನನ ಮನೆಯ ಒಬ್ಬ ಕೆಲಸದಾಕೆಯು ಕಡಿಮೆಯಾದ್ದರಿಂದ ಅವರ ವೆಚ್ಚ ತುಸು ಹೆಚ್ಚಾಗಬಹುದು. ಆದರೆ ಅವರ ನಾಲ್ಕುದುಡ್ಡು ಉಳಿಸಲಿಕ್ಕೆಂದೇ ದೇವರು ಸುಧೆಗೆ ಜನ್ಮ ಕೊಟ್ಟಿರುವದಿಲ್ಲ. 'ಜೀವೋ ಜೀವಸ್ಯ ಜೀವನಂ' ಎಂಬ ತತ್ವ ಸತ್ಯವಿದೆ. ಆದರೆ ಒಂದು ಜೀವವು ಇನ್ನೊಂದು ಜೀವವನ್ನು ನಾಶಗೊಳಿಸಿ ಬದುಕಬೇಕೆಂದು ಅದರ ಅರ್ಥವಲ್ಲ. ಒಂದು ಜೀವಕ್ಕೆ ಇನ್ನೊಂದು ಜೀವದ ಆಧಾರವಿಲ್ಲದೆ ಈ ಜಗತ್ತಿನಲ್ಲಿ ಇರುವುದು ಅಶಕ್ಯವೆಂದೇ ಅದರ ನಿಜವಾದ ಅರ್ಥ. ತನ್ನ ಜೀವನದ ಜೀವನವೆಂದು ಇನ್ನೊಂದು ಜೀವವನ್ನು ಹುಡುಕಿ ಅದರೊಡನೆ ಇರುವ ಹಕ್ಕು ಪ್ರತಿಯೊಬ್ಬ ಮನುಷ್ಯನಿಗಿದೆ. ಅಮ್ಮಾ, ಸುಧಾಕರನಂತಹ ಮಗನು ನಿಮಗಿಲ್ಲದಿದ್ದರೆ ಇಡೀ ಜಗತ್ತು ನಿಮಗೆ ಮಸಣದಂತೆ ಅನಿಸುತ್ತಿದ್ದಿಲ್ಲವೆ?

ಜಾನಕಮ್ಮನಿಗೆ ಕಣ್ಣೀರು ಒತ್ತರಿಸಿ ಬಂತು. ನನ್ನ ಮಗನು ನಿಜವಾಗಿಯೂ ಸದ್ಗುಣಿ ಇದ್ದಾನೆ."

"ಅಮ್ಮಾ, ಸುಧೆಯ ಪುನರ್ವಿವಾಹದಲ್ಲಿ ನಿಮಗೆ ಪಾಪವಿದೆಯೆಂದು ಅನಿಸುತ್ತದಲ್ಲವೇ? ತನ್ನ ಸುಖಕ್ಕೋಸ್ಕರ ಇನ್ನೊಬ್ಬರನ್ನು ಪೀಡಿಸುವುದೇ ಪಾಪ. ಸುಧಾ-ಸುಧಾಕರರು ಹಿಂದೆಂದೂ ಪಾಪ ಮಾಡಿಲ್ಲ. ಮುಂದೆಯೂ ಮಾಡಲಾರರು. ಸಮಾಜದಲ್ಲಿ ಹಲವು ಜನರು ಈ ಮದುವೆಗೆ ಪಾಪವೆನ್ನಬಹುದು. ಆದರೆ ಹಾಗೆ ಹೇಳುವವರ ಮನಸ್ಸನ್ನು ಬಿಚ್ಚಿ ತೋರಿಸಲು ಬಂದಿದ್ದರೆ ಅದರಲ್ಲಿ ಧೂರ್ತತನವೆಷ್ಟು ತುಂಬಿದೆಯೆಂದು ತಿಳಿಯಲು ಬರುತ್ತಿತ್ತು. ಜಗತ್ತಿನ ಜನರ ನಾಲಿಗೆಯಲ್ಲಿ ಮಾತ್ರ ಪುಣ್ಯವಿರುತ್ತದೆಯೇ ಹೊರತು ಹೃದಯದಲ್ಲಿ ಪುಣ್ಯವಿರುವದಿಲ್ಲ. ಸುಧೆಯ ಪುನರ್ವಿವಾಹಕ್ಕೆ ಪಾಪವೆನ್ನುವ ಈ ಜನರ ಎದುರಿನಲ್ಲಿ ಚಿತ್ರಗುಪ್ತನು ಒಂದುವೇಳೆ ತನ್ನ ಜಮಾಖರ್ಚನ್ನು ತೆಗೆದುಕೊಂಡು ಪ್ರಕಟನಾಗಿ "ಪರಸ್ತ್ರೀಯರ ಕಡೆಗೆ ತಿರುಗಿ ಸಹ ಯಾರು ನೋಡಿರುವದಿಲ್ಲ

ವೋ ಅಂಥವರಿಗೆ ಮಾತ್ರ ಪುನರ್ವಿವಾಹಕ್ಕೆ ಪಾಪವೆಂದು ಹೇಳುವ ಅಧಿಕಾರವಿದೆ' ಎಂದು ಹೇಳಿದರೆ 'ಪಾಪ-ಪಾಪ' ಎಂದು ಈಗ ಬೊಬ್ಬಿಡುತ್ತಿರುವ ಲಕ್ಷಗಟ್ಟಲೆ ನಾಲಿಗೆಗಳಲ್ಲಿ ಒಂದರಿಂದಲೂ ಆ ಶಬ್ದ ಹೊರಬೀಳಲಾರದು. ಅಮ್ಮಾ, ಜಗತ್ತಿನ ದುಃಖದ ಮೂಲ ಕಾರಣ ಇಲ್ಲಿಯೇ ಇದೆ. ಜಗತ್ತು ಹುಚ್ಚನಂತೆ ವರ್ತಿಸುತ್ತಿರುತ್ತದೆ. ಎಲ್ಲಿಯೋ ಕೇಳಿದ ಯಾವುದೋ ಕಲ್ಪನೆಯನ್ನು ತೆಗೆದುಕೊಂಡು ಅದನ್ನೇ ತಿಕ್ಕುತ್ತ ಕುಳಿತುಕೊಳ್ಳುವುದರಲ್ಲಿಯೇ ಅದಕ್ಕೆ ಸಂತೋಷವಾಗುತ್ತದೆ. ಇನ್ನೊಬ್ಬರ ಬಗ್ಗೆ ವಿಚಾರ ಮಾಡುವಾಗ ಪ್ರತಿಯೊಬ್ಬನೂ ತನ್ನ ಹೃದಯವನ್ನು ಸುತ್ತ ಬದಿಯಲ್ಲಿಟ್ಟುಬಿಡುತ್ತಾನೆ ತನ್ನ ಸ್ವಂತದ ಪ್ರಶ್ನೆ ಬಂದಾಗ ಮಾತ್ರ ಈ ಹೃದಯದ ಗಂಟು ಬಿಚ್ಚಿ ಅದರಲ್ಲಿಯ ತುಣುಕು ಚಿಂದಿಗೂ ಬೆಲೆಯಿದೆಯೆಂದು ಸಾರುತ್ತಾನೆ."

"ಆದರೆ ಹೆಂಗಸರು ಇನ್ನೊಮ್ಮೆ ಮದುವೆ ಮಾಡಿಕೊಳ್ಳಬಾರದೆಂದು ದೇವರೇ ನಿರ್ಣಯಿಸಿರುವನಲ್ಲವೇ?"

"ಅಮ್ಮಾ, ಮನುಷ್ಯನು ತನ್ನ ಮತಗಳನ್ನು ದೇವರ ಹೆಸರಿನಿಂದ ಮಾರಾಟ ಮಾಡುತ್ತಾನೆ. ಮನುಷ್ಯನಿಗೆ ಈ ರಾಜ್ಯವನ್ನೂ ಅದನ್ನು ಆಳುವ ಬುದ್ಧಿಯನ್ನೂ ಕೊಟ್ಟು ಪರಮಾತ್ಮನು ತಟಸ್ಥನಾಗಿ ನೋಡುತ್ತ ಕುಳಿತಿದ್ದಾನೆ. ಈ ರಾಜ್ಯದಲ್ಲಿಯ ಎಲ್ಲ ಕಾಯಿದೆಗಳನ್ನು ಮನುಷ್ಯನೇ ನಿರ್ಮಿಸಿರುತ್ತಾನೆ. ಯಾವುದಾದರೊಂದು ಕಾಯಿದೆಯು ಕಷ್ಟಕರವಾಗಿದ್ದರೆ ಮನುಷ್ಯನೇ ಅದನ್ನು ಬದಲಿಸಬೇಕು. ಈಶ್ವರನೇನೂ ಬದಲಿಸಲು ಅವತರಿಸುವದಿಲ್ಲ. ಆದರೆ ದೇವರು ನೀಡಿದ ಈ ಸ್ವಾತಂತ್ರ್ಯದ ದುರುಪಯೋಗವನ್ನು ಮಾತ್ರ ಮನುಷ್ಯನು ಮೇಲಿಂದ ಮೇಲೆ ಮಾಡುತ್ತಿರುತ್ತಾನೆ. ಅವನು ತನ್ನ ಬುದ್ಧಿಯನ್ನು ಒತ್ತೆಯಿಟ್ಟು ಹೃದಯವನ್ನು ಮಾರಿಬಿಡುತ್ತಾನೆ. ಇದರಿಂದ ಇತರರೂ ತನ್ನಂತೆ ದೇವರ ಮಕ್ಕಳಿರುತ್ತಾರೆಂಬುದನ್ನು ಮರೆತು ಅವರನ್ನು ಪೀಡಿಸುವುದಕ್ಕೆ ಮೊದಲು ಮಾಡುತ್ತಾನೆ. ತಲೆಯ ಕೂದಲು ಉದುರಿದ ಬೊಕ್ಕತಲೆಯ ಗಂಡಸಿಗೆ ಮದುವೆಯಾಗುವ ಅಧಿಕಾರವಿದ್ದು ಒಂದು ಕೂದಲು ಸಹ ಹಣ್ಣಾಗದಿರುವ ತರುಣಿಗೆ

ಮಾತ್ರ ಆ ಅಧಿಕಾರವಿರದಿರುವುದು ಅತ್ಯಾಚಾರವಲ್ಲದೆ ಇನ್ನೇನು? ಇಂದಿನ ಮಾನವ ಜಾತಿಯು ತನ್ನ ಪಾಪದ ಫಲವನ್ನು ಭೋಗಿಸುತ್ತದೆ. ಅದು ದೇವರ ವಿರುದ್ಧ-ಸೃಷ್ಟಿಯ ವಿರುದ್ಧ ಬಂಡೆಬ್ಬಿಸಿದೆ. ಆದರೆ ಈ ಬಂಡಾಯಕ್ಕೆ ಎಂದಿಗೂ ಜಯ ದೊರೆಯಲಾರದು. ಪುನರ್ವಿವಾಹ ಪಾಪವೆಂದೆನ್ನುವವರೆಲ್ಲ ಈ ಗುಂಪಿಗೆ ಸೇರಿದವರು. ಅಮ್ಮಾ, ಬಾಲ್ಯದಲ್ಲಿ ವಿದ್ಯೆ, ತಾರುಣ್ಯದಲ್ಲಿ ವೈವಾಹಿಕ ಸುಖ, ವೃದ್ಧಾಪ್ಯದಲ್ಲಿ ಈಶ್ವರ ಚಿಂತನ— ಈ ಪ್ರಕಾರವಾಗಿ ನಿಸರ್ಗವು ನಮ್ಮ ಆಯುಷ್ಯದಲ್ಲಿ ಪಾಲು ಮಾಡಿದೆ. ಆದರೆ ಈ ಅತ್ಯಾಚಾರೀ ಜಗತ್ತಿನಲ್ಲಿ ಕೋಟಿಗಟ್ಟಲೆ ಜನರಿಗೆ ವಿದ್ಯೆ ದೊರಕುವದಿಲ್ಲ. ಸುಧೆಯಂತಹ ಲಕ್ಷಾವಧಿ ಜನರು ಸಂಸಾರ ಸುಖಕ್ಕೆ ಎರವಾಗುತ್ತಾರೆ. ಸಾಯುವವರೆಗೂ ಸಂಸಾರ ಮಾಡುವ ಉತ್ಕಟೇಚ್ಛೆ ಇರುವುದರಿಂದ ಈಶ್ವರ ಚಿಂತನೆಗೆ ವೇಳೆಯೇ ದೊರಕದು. ಸ್ವಾರ್ಥದ ಸಗಣಿಯಲ್ಲಿಯ ಈ ಕ್ರಿಮಿಗಳು ಈಶ್ವರನ ದಿವ್ಯನಿಯಮಗಳ ಮೀಮಾಂಸೆ ಮಾಡುವುದರಲ್ಲಿ ಏನರ್ಥವಿದೆ?

'ಹಾಗಾದರೆ ದೇವರು ಈ ಜಗತ್ತಿನಲ್ಲಿ ಎಂದೂ ಕಾಣುವದಿಲ್ಲವೆ?''

ಸ್ವಾಮಿಯವರ ಮಾತನ್ನು ಕೇಳಿದರೂ ಸಮಾಧಾನವಾಗದ್ದರಿಂದ ಜಾನಕಮ್ಮ ಕೇಳಿದಳು.

"ಕಾಣದೇ ಏನು? ಆದರೆ ಕಷ್ಟಪಡದೆ ಮಾತ್ರ ಕಾಣಲು ಸಿಗುವದಿಲ್ಲ. ಅಮ್ಮಾ, ನಿಮಗಿನ್ನೂ ಈ ಮದುವೆಯಲ್ಲಿ ಪಾಪವಿದೆಯೆಂದು ಅನಿಸುತ್ತಿದ್ದರೆ ನಿಜವಾದ ಪಾಪವೆಲ್ಲಿದೆಯೆಂಬುದನ್ನು ತೋರಿಸುತ್ತೇನೆ."

"ಅಮ್ಮಾ, ನನ್ನ ಈ ಹಾಡುತ್ತಿರುವ ಎದೆಯ ಮೇಲೆ ಕೈಯಿಟ್ಟು ಹೇಳುತ್ತೇನೆ. ಸನ್ಯಾಸವನ್ನು ಸ್ವೀಕರಿಸುವ ಪೂರ್ವದಲ್ಲಿ ನಾನೋರ್ವ ಪ್ರಸಿದ್ಧ ವೈದ್ಯನಿದ್ದೆ. ನನ್ನ ಹೊಟ್ಟೆ ಬಟ್ಟೆಗೆ ಹೆಚ್ಚಾಗಿ ಬಡಬಗ್ಗರಿಗೆ ನೆರವಾಗುವಷ್ಟು ಸಂಪತ್ತು ನನಗಿತ್ತು. ಆದರೆ ನಾನು ಹಣದ ಬೆನ್ನು ಹತ್ತಿದೆ. ಬಡವರನ್ನು ವಂಚಿಸಿ ಆಣೆಯ ಔಷಧಿಗೆ ರೂಪಾಯಿ ಪಡೆದು ಶ್ರೀಮಂತನಾದೆ. ಲೋಭವೆಂಬುದು ಮಹಾ ಪಾಪವೆಂದು ನನಗೆ ಆಗ ಗೊತ್ತಾಗಲಿಲ್ಲ. ಒಮ್ಮೆ ಲೋಭದಿಂದ ಅಂಧನಾಗಿ ಈ ಗ್ರಾಮದಲ್ಲಿಯ

ಒಬ್ಬ ಬಡರೈತನ ಮಗನಿಗೋಸುಗ ಔಷಧ ಕೊಟ್ಟುದಕ್ಕಾಗಿ ೫೦ ರೂಪಾಯಿ ಬೇಡಿದೆ. ಆ ಬಡವನ ಬಳಿಯಲ್ಲಿ ಕವಡಿ ಕಾಸಿರದ್ದರಿಂದ ಹೊಲವನ್ನು ಒತ್ತಿ ಇಡಲು ಒಪ್ಪಿದನು. ಅವನು ಅನುಲಿಸಲ್ಲಿರುವ ಸಂಧಿ ಸಾಧಿಸಿ ಒತ್ತೆಯ ಕರಾರಿನ ಬದಲು ಕ್ರಯಪತ್ರ ಬರೆಯಿಸಿಕೊಂಡೆ. ಇಂದು ಆ ಮನುಷ್ಯನು ಅನ್ನಾನ್ನ ಗತಿಕನಾಗಿದ್ದಾನೆ. ಅವನ ಮಗನು ಹೆಂಡಗುಡುಕನಾಗಿದ್ದಾನೆ. ಅವನ ಬಾಣಂತಿ ಸೊಸೆಯ ಬಳಿಯಲ್ಲಿ ಕೂಸಿಗೆ ಹಾಲು ಕೊಳ್ಳಲು ಹಣವಿಲ್ಲ. ಇಂದಿಗೆ ಹತ್ತು ವರ್ಷಗಳ ವರೆಗೆ ಆ ಕುಟುಂಬವು ಅನುಭವಿಸಿದ ಕಷ್ಟಕ್ಕೆ ಹೊಣೆಯಾರು? ಈಶ್ವರನಲ್ಲ, ನಾನು-ಈ ಮಹಾ ಪಾತಕಿ-ಸದಾನಂದ ಸ್ವಾಮಿ ”

ಸ್ವಾಮಿಯವರ ಕಣ್ಣಿನಲ್ಲಿ ಅಶ್ರುಪ್ರವಾಹವು ಹರಿಯ ಹತ್ತಿತು. ಆದರೂ ನಗುವ ಪ್ರಯತ್ನ ಮಾಡಿ, “ಅಮ್ಮಾ, ಬೇಸರಪಟ್ಟು ಕೊಳ್ಳಬೇಡಿ. ಜಗತ್ತಿನಲ್ಲಿ ದೇವರ ದರ್ಶನವಾಗುವದಿಲ್ಲವೇ ಎಂದು ನೀವು ಕೇಳಿದ್ದಿರಿ. ತನ್ನ ಪಾಪ ಹಗಲಿರುಳೂ ಕಣ್ಣ ಮುಂದೆ ಕಾಣಹತ್ತಲು ಈಶ್ವರನ ದರ್ಶನವಾಗುತ್ತಿದೆ. ತನ್ನ ಪಾಪವನ್ನು ಜಗತ್ತಿನ ಮುಂದೆ ಒಪ್ಪಿಕೊಳ್ಳುವಷ್ಟು ಧೈರ್ಯ ಬಂದೊಡನೆಯೇ ಆ ಈಶ್ವರನು ಮಾತಾಡುತ್ತಾನೆ. ಕಳೆದ ಹತ್ತು ವರ್ಷಗಳಲ್ಲಿ ನನಗೆ ದೇವರು ಕಾಣುತ್ತಿದ್ದ. ಆದರೆ ಅವನು ನನ್ನೊಡನೆ ಮಾತಾಡುತ್ತಿದ್ದಿಲ್ಲ. ಅಮ್ಮಾ, ಇಂದು ನಿಮ್ಮ ಕೃಪೆಯಿಂದ ಅವನ ಮಾತು ನನ್ನ ಕಿವಿಯ ಮೇಲೆ ಬಿದ್ದಿತು. ಕಳೆದ ನಾಲ್ಕು ತಿಂಗಳಿಂದ ಯಾವ ಮಾತು ಹೇಗೆ ಆಡಬೇಕು, ಯಾರೊಡನೆ ಹೇಳಬೇಕೆಂಬುದರ ಬಗ್ಗೆ ಯೋಚಿಸುತ್ತಿದ್ದೆ. ಅಮ್ಮಾ, ನನ್ನ ಪಾಪದ ಕಟು ಫಲ ಇನ್ನೊಬ್ಬರು ಅನುಭೋಗಿಸಬೇಕಾಗಿದೆ. ನೀವು ಸುಧೆಯನ್ನು ಸೊಸೆಯನ್ನಾಗಿ ಮಾಡಿಕೊಂಡರೆ ನನ್ನಪಾಪ ಅಷ್ಟೇ ಕಡಿಮೆಯಾದೀತು.”

ಜಾನಕಮ್ಮ ಚಕಿತರಾಗಿ ಸ್ವಾಮಿಯವರ ಕಡೆಗೆ ನೋಡಹತ್ತಿದಳು.

“ಅಮ್ಮಾ, ನನ್ನ ಪಾಪದ' ಮೂಲಕ ನನ್ನ ಹಿರೇಮಗನು ಸತ್ತು, ಗಂಡನೆಂದರೇನೆಂಬುದನ್ನರಿಯುವುದರ ಪೂರ್ವದಲ್ಲಿಯೇ ‘ಸುಧೆಯು ವಿಧವೆಯಾದಳು. ಅವಳು ಸುಖಿಯಾಗಬೇಕೆಂಬುದಿಷ್ಟೇ ನನ್ನ ಇಚ್ಛೆ.

ಅವಳ ಪುನರ್ವಿವಾಹದಲ್ಲಿ ಏನಾದರೂ ಪಾಪವಿದೆಯೆಂದು ಆ ಜಗತ್ಪಾಲಕನಾದ ಪ್ರಭುವಿಗೆ ಅನಿಸಿದರೆ ಅವನು ಅದರ ಫಲವನ್ನು ನನ್ನ ಪಾಲಿಗೆ ಹಾಕಲಿ. ಅಮ್ಮಾ, ನಾನು ಸುಧೆಯ ಪಾವನೆಂದು ವಿಜ್ಞಾಪಿಸುವದಿಲ್ಲ ಅವಳ ತಂದೆಯಾಗಿ ನಿಮ್ಮ ಮುಂದೆ ಶರಗೊಡ್ಡುವೆನು. ಕೃಪೆಮಾಡಿ ನನ್ನ ಈ ಗುಣವಂತೆಯಾದ ಮಗಳನ್ನು— ನನ್ನ ಮುದ್ದು ಸುಧೆಯನ್ನು— ಉಡಿಯಲ್ಲಿ ಹಾಕಿಕೊಳ್ಳಿರಿ.”

ಸ್ವಾಮಿಯವರು ಎದ್ದು ಜಾನಕಮ್ಮನ ಮುಂದೆ ಬಿದ್ದುಬಿಟ್ಟರು. ಜಾನಕಮ್ಮ ಸದ್ಗದಿತಳಾದಳು. ‘ಸುಧೆಯೂ ನನ್ನವಳೇ ಇರುವಳು’ ಎಂದು ಅಳಹತ್ತಿದಳು.

ತೀರ್ಥದಂತೆ ಪವಿತ್ರವಾದ ಅಶ್ರುವನ್ನು ನೋಡಬೇಕೆಂದೋ ಏನೋ ಚಂದ್ರಮನು ಅದೇ ಹೊತ್ತಿಗೆ ಮೋಡದೊಳಗಿಂದ ಹೊರಬಿದ್ದನು.

× ×

ವಾರುಣಿಯ ಮನೆಯ ಮುಂದಿನ ದಿನ್ನೆಯ ಬಳಿ ಹೋಗಿ ಕಾಳಿಯು ಒಂದು ಮರದ ಮರೆಯಲ್ಲಿ ನಿಂತು ಸುತ್ತುಮುತ್ತಲಿನ ಸೃಷ್ಟಿ ಸೌಂದರ್ಯವನ್ನು ನಿರೀಕ್ಷಿಸಹತ್ತಿದನು. ಆಕಾಶದಿಂದ ಭೂಮಿಯವರೆಗೆ ಬೆಳದಿಂಗಳ ಸಾಗರವು ಪಸರಿಸಿಕೊಂಡಿತ್ತು. ದಿನ್ನೆಯು ಸಮುದ್ರದಲ್ಲಿ ಮುಳುಗಿ ಹೋಗಿರುವ ಪರ್ವತದಂತೆ ತೋರುತ್ತಿತ್ತು. ವಾರುಣಿಯು ಬರಲು ಸಮುದ್ರದಲ್ಲಿ ಅಪ್ಸರೆಯರಿದ್ದರೆಂಬ ಪೌರಾಣಿಕ ವರ್ಣನೆಯು ಸಾರ್ಥಕವಾಗಬಹುದೆಂದು ಕಾಳಿಗೆ ಅನಿಸಿತು. ಪೂರ್ವಜನ್ಮದ ಒಂದು ಸುಖಸ್ಮೃತಿಯಂತೆ ಆ ರಮ್ಯದೃಶ್ಯವು ಅವನ ಕಣ್ಣಮುಂದೆ ಕುಣಿಯಹತ್ತಿತು.

ಕೆಲಹೊತ್ತಿನಲ್ಲಿಯೇ ತಂದೆಯು ಮಲಗಿದುದನ್ನು ನೋಡಿ ವಾರುಣಿಯು ಮನೆಯಿಂದ ಹೊರಬಿದ್ದಳು. ಗಂಗಾಧರನು ಏನು ಮಾಡುತ್ತಿದ್ದಾನೆಂಬುವದನ್ನೂ ನೋಡಲು ಮರೆಯಲಿಲ್ಲ. ಆದರೆ ಮಧುಕರನ ಸೂಚನೆಯಂತೆ ಆತನು ನಿದ್ದೆಯ ಸೋಗು ಹಾಕಿದ್ದುದರಿಂದ ಅವನ

ಕಡೆಗೆ ವಿಶೇಷ ಲಕ್ಷ್ಯ ಕೊಡದೆ ನಿರ್ದಿಷ್ಟ ಸ್ಥಳಕ್ಕೆ ಬರುವುದಕ್ಕಾಗಿ ಹೊರಟಳು.

ದಿನ್ನೆಯ ಕೆಳಗೆ ನಿಂತಿರುವ ವಾರುಣಿಯ ಕಡೆ ನೋಡುತ್ತ-ನೋಡುತ್ತ ಕಾಳಿಯ ದೇಹಭಾನವೇ ಹಾರಿಹೋಯಿತು. ಚಂದ್ರನು ತನ್ನ ಅಮೃತ ಕರಗಳಿಂದ ಅವಳ ಮೂರ್ತಿಯನ್ನು ನಿರ್ಮಿಸಿರಬೇಕು. ಕಾಳಿಯು ನಿಂತ ದಿಕ್ಕಿಗೆ ಅವಳ ಮುಖಮಂಡಲವು ತಿರುಗಿದಾಗ ಅವಳ ಮುದ್ರೆಯ ಮೇಲಿನ ಬೆಳದಿಂಗಳು ಸುತ್ತಲಿನ ಬೆಳದಿಂಗಳಿಗಿಂತ ರಮ್ಯವಾಗಿದೆಯೆಂದು ಆತನಿಗೆ ಭಾಸವಾಯಿತು. ಹೀಗೆ ನೋಡುತ್ತಿರುವಾಗಲೇ ಮರಣ ಲಭಿಸಿ ಬಿಟ್ಟರೆ ಅದರಂತಹ ಆನಂದದಾಯಕ ಮೃತ್ಯುವೇ ಇಲ್ಲವೆಂಬ ವಿಚಾರವು ಅವನ ಮನಸ್ಸಿನಲ್ಲಿ ಮಿಂಚಿಹೋಯಿತು. ಸುಧಾಕರನು ಬಂದೊಡನೆ ಏನೇನು ಸಂಭವಿಸಬಹುದೆಂಬ ಚಿತ್ರವನ್ನು ಅವನು ಕಲ್ಪಿಸುತ್ತಿರುವಾಗ ದಿನ್ನೆಯ ಕಡೆಯಿಂದ ಒಂದು ವ್ಯಕ್ತಿ ಬರುತ್ತಿರುವುದು ಕಾಣಿಸಿತು. ಅವನು ಸುಧಾಕರನೇ ಇರಬೇಕೆಂಬ ಬಗ್ಗೆ ಸಂದೇಹವಿಲ್ಲದ್ದರಿಂದ ಕಾಳಿಯು ಮುಖತಿರುಹಿದನು. ಆದರೆ ಕೂಡಲೇ ವಾರುಣಿಯು ಚೀರಿದ್ದರಿಂದ ಅವನು ಹಿಂತಿರುಗಿ ನೋಡಿದಾಗ ಆ ವ್ಯಕ್ತಿಯು ವಾರುಣಿಯೊಡನೆ ಬಡಿದಾಡುತ್ತಿತ್ತು; ಹಾಗೂ ಅವಳ ಕೈಯೊಳಗಿನ ಬಳೆಯನ್ನು ತೆಗೆದುಕೊಳ್ಳಲು ಪ್ರಯತ್ನಿಸುತ್ತಿತ್ತು. ಕಾಳಿಯು ಕೂಡಲೇ ಓಡಿಹೋಗಿ ಆ ವ್ಯಕ್ತಿಯನ್ನು ಹಿಡಿದು ಹಿಂದಕ್ಕೆಳೆದನು. ಇಬ್ಬರಲ್ಲಿಯೂ ಕೆಲಹೊತ್ತು ಬಡಿದಾಟವಾಗಿ ಕೊನೆಗೆ ಕಳ್ಳನು ಜಾರಿ ಓಡಿಹೋಗಹತ್ತಿದನು. ಕಾಳಿಯು ಅವನ ಬೆನ್ನುಹತ್ತುವವನಿದ್ದ. ಆದರೆ ವಾರುಣಿಯು ಅವನಿಗೆ ಹೋಗಗೊಡಲಿಲ್ಲ.

"ಪಕ್ಕಾ ಹೆಂಡಗುಡುಕನಿದ್ದಾನೆ. ಸತ್ತವ! ನಾಳೆ ತಂದೆಯವರಿಗೆ ಹೇಳಿ ಹೊರದಬ್ಬಿದರಾಯಿತು."

"ಕೈಯ್ಗೇನಾದರೂ ಹತ್ತಿಲ್ಲವಷ್ಟೇ!" ಕಾಳಿಯು ಕೇಳಿದನು.

ವಾರುಣಿಯು ಉತ್ತರ ಕೊಡುವ ಬದಲು ಚಕಿತಳಾಗಿ ನೋಡ ಹತ್ತಿದಳು. "ತಾವೇ ಏನು ಅವರು..?

ತನ್ನನ್ನು ಯಾರೆಂಬುದು ತಿಳಿದುಕೊಂಡಿರುವಳೆಂಬುದೇ ಕಾಳಿಗೆ ತಿಳಿಯದಾಯಿತು.

"ಸುಧಾಕರರಿಗೆ ಕಾಂಚನಮ್ಮನ ಚಿತ್ರವನ್ನು ಬಿಡಿಸಿಕೊಟ್ಟವರು ಅಲ್ಲವೇ?"

ಕಾಳಿಯು, ಅಹುದೆಂದು ತಲೆಯಲ್ಲಾಡಿಸಿದನು.

ಇಬ್ಬರೂ ಒಬ್ಬರನ್ನೊಬ್ಬರು ನಿಟ್ಟಿಸಿ ನೋಡಹತ್ತಿದರು. ಏನು ಮಾತಾಡಬೇಕೆಂದು ಒಬ್ಬರಿಗೂ ಹೊಳೆಯದು. ಪ್ರೀತಿ ದೇವಿಯು ಮಂಕುಬೂದಿಯನ್ನೆರಚಿ ಮಂತ್ರಮುಗ್ಧರನ್ನಾಗಿ ಮಾಡಿದ್ದಳೋ ಏನೋ! ನೇತ್ರಗಳಲ್ಲಿ ಬಂದು ನಿಂತಿರುವ ಎರಡೂ ಜೀವಗಳ ಈ ಮೂಕ ಭೆಟ್ಟಿಯನ್ನು ಕಂಡು ಆಕಾಶಕ್ಕೂ ಆನಂದವಾಗಿರಬೇಕು. ಮಧ್ಯದಲ್ಲಿ ಬಂದ ಮೋಡಗಳನ್ನು ದೂರಸರಿಸಿ ಅದು ಈಗ ಮುಗುಳುನಗೆ ನಗುತ್ತಿತ್ತು. ವಾರುಣಿಯ ಕೈಗೆ ಎಲ್ಲಿಯಾದರೂ ಪೆಟ್ಟುತಗಲಿದೆಯೋ ಎಂಬುದನ್ನು ನೋಡುವುದಕ್ಕೋಸ್ಕರ ಕಾಳಿಯು ಅವಳ ಬಲಗೈಯ್ಯನ್ನು ತನ್ನ ಕೈಯ್ಯೊಳಗೆ ತೆಗೆದುಕೊಂಡ. ಇಬ್ಬರ ಶರೀರದಲ್ಲಿಯೂ ಆನಂದದ ನವೀನ ಪ್ರವಾಹವು ಹರಿದಾಡಹತ್ತಿತು. ಕಾಳಿಯು 'ವಾರುಣಿ' ಎಂದು ಕರೆದನು. ಆ ಮೂರು ಅಕ್ಷರ ಅವಳಿಗೆ ಹೂವಿನಂತೆ ಕೋಮಲವೆನಿಸಿತು. ಆದರ ತನ್ನ ಹೆಸರು ಇವರಿಗೆ ಹೇಗೆ ತಿಳಿಯಿತೆಂಬುದು ಮಾತ್ರ ಗೊತ್ತಾಗಲಿಲ್ಲ. ಕಾಳಿಯು ಅವಳ ಕೈಯ್ಯನ್ನು ಹಾಗೆಯೇ ಹಿಡಿದು ಕೊಂಡು ನಿಂತು ಕೊಂಡನು. ವಾರುಣಿಗೂ ತನ್ನ ಕೈ ಹಿಂದಕ್ಕೆಳೆದುಕೊಳ್ಳಬೇಕೆಂದೆನಿಸಲಿಲ್ಲ.

ಎದುರಿನಿಂದ ಯಾರೋ ಕೆಲವರು ಬರುತ್ತಿರುವುದನ್ನು ಕಂಡು ವಾರುಣಿಯು ಗಾಬರಿಗೊಂಡು ದೂರಸರಿದಳು. ಅವಳು ಕಾಳಿಗೆ ಬೆನ್ನ

ದಾಟಿ ಆಚೆಯ ಕಡೆ ಹೋಗಬೇಕೆಂದು ಸೂಚಿಸಿದಳು. ಎದುರಿನಿಂದ ಬರುವ ಮೂವರ ಕಡೆ ಬೆನ್ನು ಮಾಡಿ ಕಾಳಿಯು ದಿನ್ನೆ ಹತ್ತ ತೊಡಗಿದ

ಮಧುಕರ, ದಾದಾಸಾಹೇಬರು ಮೊದಲು ರಾವ ಸಾಹೇಬರ ಮನೆಗೆ ಹೋದರು. ವಾರುಣಿಯು ಮನೆಯಿಂದ ಹೊರಬೀಳಲು ಗಂಗಾಧರನು ಸದ್ದು ಮಾಡದೆ ಅವಳ ಹಿಂದಿನಿಂದ ಹೋಗಿ ಸುಧಾಕರನು ಬಂದಿರುವನೋ! ಇಲ್ಲವೋ! ಎಂಬುದನ್ನು ನೋಡಿ ತಿಳಿಸಬೇಕೆಂದು ಮಧುಕರನು ಮೊದಲೇ ಹೇಳಿದ್ದನು. ಆದರೆ ರಾವ ಸಾಹೇಬರ ಮನೆಗೆ ಮಧುಕರ, ದಾದಾಸಾಹೇಬರು ಬಂದಾಗ ಅಲ್ಲಿ ಗಂಗಾಧರನ ಸುಳಿವೇ ಇರಲಿಲ್ಲ. ವಾರುಣಿಯು ರಾತ್ರಿಯಲ್ಲಿ ಮನೆಯಲ್ಲಿಲ್ಲವೆಂದು ಗೊತ್ತಾದರೂ ರಾವಸಾಹೇಬರಿಗೆ ಸಿಟ್ಟು ಬರಬಹುದೆಂದು ಊಹಿಸಿ ಅವರನ್ನೆಬ್ಬಿಸಿದರು. ವಾರುಣಿಯಿಲ್ಲದ್ದನ್ನು ಕಂಡು ಅವರು ಸಿಟ್ಟಿನಿಂದ ಕಿಡಿಕಿಡಿಯಾದರು. ಮಧುಕರನ ಅಭಿಪ್ರಾಯದಂತೆ ವಾರುಣಿಯ ಶೋಧಕ್ಕಾಗಿ ರಾವಸಾಹೇಬರು ಹೊರಟಿದ್ದರು. ಈ ಮೂರ್ತಿಗಳು ದಿನ್ನೆಯ ಸಮೀಪ ಬರಲು ವಾರುಣಿಯು ಯಾರದೋ ಕೈ ಹಿಡಿದು ನಿಂತಿದ್ದಾಳೆಂದು ಕಂಡು ಬಂತು. ಅವರು ಅವಳನ್ನು ಸಮೀಪಿಸುವುದರೊಳಗಾಗಿಯೇ ಆ ವ್ಯಕ್ತಿಯು ದಿನ್ನೆ ಹತ್ತಿ ಹೋಗುತ್ತಿದ್ದ. ಅವನನ್ನು ಬೆನ್ನು ಹತ್ತಬೇಕೆಂದು ಮಧುಕರನು ಯೋಚಿಸಿದ. ಆದರೆ ಅಂಜುಬುರುಕುತನದಿಂದಲೋ!, ಅಥವಾ ಇನ್ನಾವ ಕಾರಣದಿಂದಲೋ ಅವನ ತಲೆಯೊಳಗಿನ ವಿಚಾರ ಕಾಲತನಕ ಇಳಿಯಲಿಲ್ಲ.

ವಾರುಣಿಯ ಸಮೀಪ ಹೋದೊಡನೆಯೇ ರಾವಸಾಹೇಬರು ಕೆರಳಿ "ಏ...ಸೂ........ಮಗಳೇ! ಈ ಅಪರಾತ್ರಿಯಲ್ಲಿ ಇಲ್ಲಿಗೇಕೆ ಬಂದೆ."

"ಚಂದ್ರನನ್ನು ನೋಡುವದಕ್ಕೆ."

"ಮುಖಚಂದ್ರ ಇರಬಹುದು." ಎಂದು ಮಧುಕರನು ಗುಣುಗುಟ್ಟಿದರೂ ವಾರುಣಿಯು ಅವನ ಕಡೆಗೆ ಲಕ್ಷ್ಯ ಕೊಡಲಿಲ್ಲ.

"ಈಗ ಇಲ್ಲಿಂದ ದಿನ್ನೆ ಹತ್ತಿ ಹೋದವರು ಯಾರೇ? ಅವನೊಡನೆ ಅಂಥಾ ಕಲಹವೇನಿತ್ತು? ಸುಧಾಕರನು ಕಲಿಸಲು ಬರದಿದ್ದರೆ ಚಿತ್ತಕ್ಕೆ ಶಾಂತಿಯೇ ಇರುವದಿಲ್ಲ. ನೀನೆಷ್ಟೇ ಕುಣಿದರೂ ನಾನು ನಿನ್ನನ್ನು ಸುಧಾಕರನಿಗೆ ಕೊಡುವದಿಲ್ಲ."

"ನಾನೂ ಸುಧಾಕರನೊಡನೆ ಮದುವೆಯಾಗುವದಿಲ್ಲ."

ಇದರಲ್ಲಿ ಕಪಟವಿದೆಯೆಂದು ಮೂವರಿಗೂ ಅನಿಸಿತು. ಸುಧಾಕರನಂತಹ ಶಿಕ್ಷಕನು ರಾತ್ರಿ ಹತ್ತು ಘಂಟೆಗೆ ಏಕಾಂತದಲ್ಲಿ ಶಾಲೆಯ ವಿದ್ಯಾರ್ಥಿನಿಯ ಭೆಟ್ಟಿ ತೆಗೆದುಕೊಳ್ಳುವದೆಂದರೆ ಅಸಭ್ಯತನವಾಗುವುದರಿಂದ ಅವನಿಂದ ಲೇಖೀ ಮಾಫಿ ಬರೆಯಿಸಿಕೊಂಡ ಹೊರತು ಶಾಲೆಯಲ್ಲಿ ತೆಗೆದುಕೊಳ್ಳಬಾರದೆಂದು ಆ ಮೂವರೂ ನಿಶ್ಚಯಿಸಿದರು.

## ಪ್ರಕರಣ ೩೧.

ಶಿವಮಂದಿರದ ದಿನ್ನೆ ಕಾಣಹತ್ತಿದಾಗ ಸುಧೆಗೆ ಜೀವದಲ್ಲಿ ಜೀವ ಬಂದಿತು. ತನ್ನನ್ನು ಹಿಡಿಯುವದಕ್ಕೋಸುಗ ಭಾವ ಮತ್ತು ಅಣ್ಣಾ ಹಿಂದೆಯೇ ಬರುತ್ತಿದ್ದಾರೆಂದು ಎಷ್ಟೋ ಸಾರೆ ಭಾಸವಾಯಿತು. ಆಗ ಆಕೆಗೆ ಬೆಳದಿಂಗಳಿನಿಂದ ಅರಳಿ ತೋರುವ ಸೃಷ್ಟಿ ಸೌಂದರ್ಯವೂ ತೋರಲಿಲ್ಲ. ಅಪರಾತ್ರಿಯಲ್ಲಿ ಒಬ್ಬಳೇ ಸಮುದ್ರದ ದಂಡೆಯ ಮೇಲೆ ಓಡುತ್ತಿದ್ದೇನೆಂಬ ಅಂಜಿಕೆಯೂ ಆಗಲಿಲ್ಲ. ಅವಳ ನೇತ್ರ ಮನಸ್ಸುಗಳೆಲ್ಲ ಸುಧಾಕರನ ಚಿಂತೆಯಲ್ಲಿಯೇ ಇದ್ದವು.

ದಿನ್ನೆ ಕಾಣಹತ್ತಿದಂತೆ ಮಾತ್ರ ಅವಳ ಹೃದಯದಲ್ಲಿ ಮಿಂಚಿನಂತೆ ಹೊಳೆಯುತ್ತಿರುವ ಧೈರ್ಯ ಒಮ್ಮೆಲೇ ಕುಸಿದು ಬಿದ್ದಿತು. "ಜಾನಕಮ್ಮನವರ ಮೇಲೆ ಸ್ವಾಮಿಯವರ ಮಾತಿನ ಪರಿಣಾಮವಾಗದಿದ್ದರೆ ನನ್ನ ಗತಿಯೇನು? ಸುಧಾಕರ-ನನ್ನಲ್ಲಿ ಯಾವ ಸಂಬಂಧ ಉಳಿದೀತು?

ನಾನೇನೋ ರೌರವ ನರಕದಿಂದ ಸ್ವರ್ಗದೆಡೆಗೆ ಹೋಗಲು ಓಡಿ ಬಂದೆ. ಆದರೆ ಸ್ವರ್ಗದೊಳಗೆ ಹೋಗುವಷ್ಟು ಪುಣ್ಯ ನನ್ನಲ್ಲಿದೆಯೇ? ಜಾನಕಮ್ಮ ಅಲ್ಲಗಳೆವರೆ ನನಗೆ ತ್ರಿಶಂಕು ಸ್ವರ್ಗವೇ ಗತಿ.”

ಈ ವಿಚಾರದಿಂದ ಸುಧೆಯು ಕ್ಷಣಕಾಲ ಹೋದವು. ಎನ್ನಿಯು ಕೆಳಬದಿಯ ಹಾಸುಗಲ್ಲಿನ ಮೇಲೆ ದೊಪ್ಪನೆ ಕುಳಿತುಬಿಟ್ಟಳು. ನಿರಾಶೆಯಿಂದ ಚಂದ್ರನೆಡೆಗೆ ನೋಡಿದಳು. ‘ಚಂದ್ರನು ನನ್ನ ಕೈಗೆ ಹತ್ತದಿದ್ದರೂ ಅವನ ಬೆಳದಿಂಗಳು ಸಿಕ್ಕೇ ಸಿಗುತ್ತದೆ. ಸುಧಾಕರನು ನನ್ನವನಾಗಿರದಿದ್ದರೂ ಅವನ ಪ್ರೇಮ ಲಭಿಸಲು ಏನಡ್ಡಿ?’ ಸಮುದ್ರದ ತುಷಾರಗಳನ್ನು ತೆಗೆದುಕೊಂಡು ಬರುವ ಶೀತಲವಾಯುವನ್ನು ಮುಷ್ಟಿಯಲ್ಲಿ ಹಿಡಿಯಲು ಪ್ರಯತ್ನ ಪಟ್ಟಳು. ಗಾಳಿಯು ಬುರ್ರನೆ ಹೊರಟು ಹೋಯಿತು. ಆದರೆ ಅದರ ಆನಂದಕರ ಸ್ಪರ್ಶಮಾತ್ರ ಅದರ ಜೊತೆಗೇ ಓಡಿಹೋಗಲಿಲ್ಲ. ಸುಧಾಕರನು ತನ್ನವನಾಗದಿದ್ದರೂ ಅವನ ಸುಖದಾಯಕ ಪ್ರೇಮ ತನಗೇ ಲಭಿಸಬಹುದೆಂಬ ಆಸೆಯು ಅವಳ ಮನಸ್ಸಿನಲ್ಲಿ ಕುಣಿಯ ಹತ್ತಿತು. ಮೇಲೆ, ಕೆಳಗೆ, ಆಕಾಶದತ್ತ, ಸಮುದ್ರದೆಡೆಗೆ ಅವಳು ದೃಷ್ಟಿಹಾಯಿಸಿದಳು ಒಬ್ಬರಿಂದೊಬ್ಬರು ದೂರದಲ್ಲಿದ್ದರೂ ಉತ್ಕಟ ಪ್ರೇಮ ಮಾಡಲು ಬರುವದೆಂಬ ತತ್ವ ವಿಶ್ವವನ್ನೇ ವ್ಯಾಪಿಸಿ ಬಿಟ್ಟದೆಯೆಂದು ಅವಳಿಗೆ ಭಾಸವಾಯಿತು. ಪೃಥ್ವಿಗೆ ಆಕಾಶದ ಬಾಹುಪಾಶದಲ್ಲಿ ಬೀಳುವ ಸುಖವೆಂದೂ ಲಭಿಸುವದಿಲ್ಲ. ಆದರೆ ಅವಳ ಇಡೀ ಜೀವನ ಆಕಾಶವನ್ನೇ ಅವಲಂಬಿಸಿರುತ್ತದೆ. ಆಕಾಶವು ಕ್ಷಿತಿಜರೂಪಿ ಕೈಗಳನ್ನು ಎಷ್ಟೇ ಪಸರಿಸಿದರೂ ಪೃಥ್ವಿಗೆ ಬರೇ ಸ್ಪರ್ಶದ ಆಭಾಸ ಮಾತ್ರವಾಗುತ್ತಿದೆ. ಆದರೆ ಆಕಾಶದ ಹೃದಯದಿಂದ ಹರಿಯುವ ಪ್ರೇಮ ಪ್ರವಾಹವನ್ನು ಯಾರೂ ತಡೆಯಲಾರರು. ಅದು ಸಹಜವಾಗಿ ಪೃಥ್ವಿಯ ಹೃದಯದಲ್ಲಿ ಹೋಗಿ ಪೃಥ್ವಿಯನ್ನು ಅರಳಿಸಿಬಿಡುತ್ತದೆ. ಸಾಗರ ಲಹರಿಗಳು ಸಹ ಇದರಂತೆಯೇ ಅಲ್ಲವೇ? ಅವು ತಮ್ಮ ಕೈಗಳನ್ನು ಎಷ್ಟೇ ಮೇಲಕ್ಕೆತ್ತಿದರೂ ದೂರದಲ್ಲಿದ್ದ ಚಂದ್ರಮನು ದೂರದಲ್ಲಿಯೇ ಇರುವನು ಆದರೂ ಅವನ ದರ್ಶನವಾದರೆ ಸಾಕು. ಅವುಗಳ ಹೃದಯ ಉಕ್ಕಿಬರುತ್ತಿದೆ.

"ಸುಧಾಕರರ ಮೇಲೆ ನನಗೆ ನಿಜವಾಗಿಯೂ ಈ ರೀತಿ ಪ್ರೇಮ ಮಾಡಲು ಬರಬಹುದು. ಜಾನಕಮ್ಮನವರು ಅವರನ್ನು ನನ್ನವರಾಗಗೊಡದಿದ್ದರೂ ಅವರು ನನ್ನವರಾಗಬಹುದು. ಅವರ ಶರೀರ ನನ್ನದಾಗದಿದ್ದರೂ ಅವರ ಹೃದಯ ನನ್ನದಾಗಲಿಕ್ಕೆ ಏನಡ್ಡಿ? ಪ್ರೇಮ ಮಾಡುವದು ಶರೀರದ ಮೇಲೇನೂ ಅಲ್ಲ. ಶರೀರವೇನೂ ನಿನ್ನೆ ಇದ್ದಿಲ್ಲ, ಇಂದು ಇದೆ, ನಾಳೆ ಇರಲಾರದು. ಆದರೆ ಪ್ರೇಮ ಅಮರವಾದದ್ದು. ಪ್ರೇಮಕ್ಕಾಗಿಯೇ ಪ್ರೇಮಮಾಡಬೇಕು. ಈ ಪರಿಯ ಪ್ರೇಮ ಮಾಡುವ ಶಕ್ತಿ ದೇವರು ನನಗೆ ದಯಪಾಲಿಸಬಹುದೇ? ದಯಪಾಲಿಸದಿರಲಿಕ್ಕೆ ಏನಾಗಿದೆ? ಯಾವ ಪ್ರೇಮದಲ್ಲಿ ಶರೀರ ಸುಖದ ಸಂಬಂಧ ಲೇಶ ಮಾತ್ರವೂ ಇರುವದಿಲ್ಲವೋ ಅಂತಹ ಪ್ರೇಮವೇ ಉಚ್ಚ ತರಗತಿಯದಾಗಬಹುದು "

ಕಲ್ಲಿನ ಮೇಲೆ ಕೈಯಿಟ್ಟು ಅದರ ಮೇಲೆ ತಲೆ ಇಟ್ಟಂದಿನಿಂದ ಸುಧೆಗೆ ಗುಂಗು ಏರತೊಡಗಿತ್ತು. ಕಳೆದ ಒಂದೆರಡು ದಿನಗಳಿಂದ ಅವಳ ಹೃದಯ ದುಃಖದಿಂದ ತುಂಬಿ ಭಾರವಾಗಿ ಬಿಟ್ಟಿತ್ತು. ಅದರಿಂದ ಒಂದು ನಿಮಿಷವೂ ನಿದ್ರೆ ದೊರೆತಿದ್ದಿಲ್ಲ. ಮನೆಯಿಂದ ಹೊರಬಿದ್ದೊಡನೆಯೇ ಹೃದಯದ ಭಾರ ಇಲ್ಲದಂತಾಗಿಬಿಟ್ಟಿತು. ಅವಳು ಕಲ್ಲಮೇಲೆ ಮೈಯ್ಯಾನಿಸಿದ್ದೇ ತಡ, ಸೃಷ್ಟಿಮಾತೆಯು ಅವಳ ಮೈಮೇಲೆ ಪುಷ್ಪಸುಗಂಧದಿಂದ ಸುವಾಸಿಕವಾದ ತನ್ನ ಕೈಯಾಡಿಸಿದಳು. ಗಾಳಿಯ ಬೀಸಣಿಕೆಯಿಂದ ಗಾಳಿಹಾಕಹತ್ತಿದಳು. ಚಂದ್ರನ ಬೆಳಕಿನಿಂದ ಅವಳ ನಿದ್ದೆ ಕೆಡಬಾರದೆಂದು ಮೋಡದ ಕಾಗದ ಹಚ್ಚಿ ಅದರ ಬೆಳಕು ಕಡಿಮೆ ಮಾಡಿದಳು.

ಸುಧೆಯ ಕಣ್ಣಿಗೆ ಕಣ್ಣು ಹತ್ತಿ ಎಂಟು ಹತ್ತು ನಿಮಿಷಗಳಾಗಿರಲಿಕ್ಕಿಲ್ಲ. ಅಷ್ಟರಲ್ಲಿ ಸ್ವಾಮಿಯವರು ಸ್ವಲ್ಪದೂರ ಹೋಗೆಂದು ಹೇಳಿದ್ದರಿಂದ ಸುಧಾಕರನು ಸಮುದ್ರದ ದಂಡೆಯ ಮೇಲೆ ಕುಳಿತುಕೊಳ್ಳಬೇಕೆಂದು ದಿನ್ನೆ ಇಳಿದು ಅಲ್ಲಿಗೆ ಬಂದಿದ್ದನು. ನಿದ್ರಿತ ಸುಧೆಯನ್ನು ಕಂಡು ಅವನು ವಿಸ್ಮಯಗೊಂಡನು. "ಈ ಸಮಯದಲ್ಲಿ ಸುಧೆಯು ಅಣ್ಣನ ಮನೆಯಲ್ಲಿ ಕಣ್ಣೀರಿಳಿಸುತ್ತ ಕುಳಿತಿರಬಹುದು; ತಾಯಿ ಒಪ್ಪಿಗೆ ದೊರೆ

ತೊಡನೆ ದಾದಾಸಾಹೇಬರ ಮನೆಗೆ ಹೋಗಿ ಕರೆದುಕೊಂಡು ಬರಬೇಕು. ನನ್ನ ಈ ರೀತಿಯನ್ನು ನೋಡಿ ದಾದಾಸಾಹೇಬರು ಚಕಿತರಾಗುವರು" ಎಂಬಿವೇ ಮೊದಲಾದ ಕಲ್ಪನೆಗಳು ಅವನ ತಲೆಯಲ್ಲಿ ಸುಳಿದಾಡುತ್ತಿದ್ದವು.

ಸುಧೆಯ ನಿದ್ರಿತ ಮೂರ್ತಿಯ ಕಡೆಗೆ ನೋಡುತ್ತ ನೋಡುತ್ತಿದ್ದಂತೆ ಅವನು ತನ್ನನ್ನೇ ಮರೆತುಬಿಟ್ಟನು. ಅವಳೊಂದು ಸುಂದರ ಪ್ರತಿಮೆಯಂತೆ ಆತನಿಗೆ ಕಂಡಳು. ಜಗತ್ತಿನ ಬಲಾತ್ಕಾರಕ್ಕೆ ಬೇಸತ್ತು ತಿರುಗಿ ಸಮುದ್ರದೊಳಗೆ ಹೋಗಿಬಿಡಬೇಕೆಂದು ದಂಡೆಯವರೆಗೆ ಬಂದ ಲಕ್ಷ್ಮಿಯು ಸಮುದ್ರದಲ್ಲಿ ಹೋಗಿಯಾದರೂ ಏನು ಮಾಡುವದೆಂದು ಯೋಚಿಸುತ್ತ ಇಲ್ಲಿ ಕುಳಿತಾಗ ನಿದ್ದೆ ಬಂದಿರಬೇಕು. ಬಾಲಕನಂತೆ ನಿಷ್ಪಾಪವಾಗಿ ಕಾಣುವ ಅವಳ ಮುದ್ರೆಯನ್ನು ನೋಡಿಯೇ ಸಂಪೂರ್ಣ ಸೃಷ್ಟಿಯು ಅವಳೊಡನೆ ಆಡುವುದರಲ್ಲಿ ಮೈ ಮರೆತುಬಿಟ್ಟಿತ್ತು. ಗಾಳಿಯು ಅವಳ ಕೂದಲಿನೊಡನೆ "ಹುತ್ತುತ್ತು" ಆಡುತ್ತಿತ್ತು. ಚಂದ್ರಕಿರಣಗಳು ಅವಳ ಸೆರಗಿನೊಡನೆ ಕಣ್ಣುಮುಚ್ಚಾಣಿಕೆ ಆಟ ಆಡುತ್ತಿದ್ದವು. ಈ ರಮ್ಯದೃಶ್ಯವನ್ನು ನೋಡಿ ಅವನು ಆನಂದದಿಂದ ಒಂದು ಕ್ಷಣಹೊತ್ತು ಕಣ್ಣುಮುಚ್ಚಿಬಿಟ್ಟನು. ಅವನಿಗೆ ತನ್ನ ಹೃದಯದಲ್ಲಿಯೂ ಸುಧೆಯು ಹಾಗೆಯೇ ಮಲಗಿರುವಳೆಂದು ಭಾಸವಾಯಿತು.

ಸುಧಾಕರನು ಮೆಲ್ಲನೆ ಕುಳಿತುಕೊಂಡನು. ಓರ್ವ ಸುಂದರ ಬಾಲಕನನ್ನು ನೋಡಲು ಮುದ್ದಿಡುವ ಮೋಹ ತಡೆಯಲಾಗದಂತೆ ಅರಿಯದೆ ಅವನ ಅಧರ ಸುಧೆಯ ಗಲ್ಲದ ಕಡೆ ಹೋಯಿತು. ಅವಳ ಗಲ್ಲಕ್ಕೆ ಅಧರ ಸ್ಪರ್ಶವಾಗುವದಕ್ಕಿಂತ ಮುಂಚೆ ಅವನ ಲಕ್ಷ್ಯ ಅವಳ ಹಣೆಯ ಕಡೆಗೆ ಹೋಯಿತು. ಅಲ್ಲಿ ಕುಂಕುಮ ತಿಲಕವಿದ್ದಿಲ್ಲ. ಈ ತಿಲಕ ಹಚ್ಚಬೇಕೋ ಬಾರದೆಂಬುದರ ಬಗ್ಗೆಯೇ ಮೇಲೆ ಮಂದಿರದಲ್ಲಿ ಚರ್ಚೆ ನಡೆದಿರಬೇಕು. ಆದರೆ.... ... ಅದಕ್ಕೆ ತಾಯಿ ಒಪ್ಪದಿದ್ದರೆ?

ಸುಧಾಕರನು ನಿಟ್ಟುಸಿರಿಟ್ಟ. ಸುಧಾಕರನು ಸಮೀಪದಲ್ಲಿರುವದನ್ನು ಕಂಡು ಸುಧೆಯು ಏಳತೊಡಗಿದಳು. ಅವಳನ್ನು ಏಳಗೊಡದೆ 'ಸುಧಾ' ಎಂದು ಕರೆದನು.

"ಜಾನಕಮ್ಮನವರು ಒಪ್ಪಿದರೆ?" ಸುಧೆಯು ತಡವರಿಸುತ್ತ ಕೇಳಿದಳು.

"ಇನ್ನೂ ಮಾತುಕತೆ ನಡೆಯುತ್ತಲೇ ಇದೆ."

"ಅಮ್ಮನವರಿಗೆ ಸೇರದಿದ್ದರೆ?"

"ಸೇರಲಿ, ಸೇರದಿರಲಿ; ನೀನು ನನ್ನವಳೇ ಇರುವಿ. ನನ್ನ ನಿನ್ನ ಸಂಬಂಧ ಇನ್ನೂ ನಿಶ್ಚಯಿಸತಕ್ಕದ್ದಿದೆ. ಆದರೆ ನೀನು ನನ್ನವಳಿರುವಿಯೆಂಬುದನ್ನು ತಪ್ಪಿಸಲು ಬ್ರಹ್ಮದೇವನಿಗೂ ಶಕ್ಯವಿಲ್ಲ."

ಇಬ್ಬರೂ ಪ್ರೇಮಪೂರ್ಣ ದೃಷ್ಟಿಯಿಂದ ಒಬ್ಬರೊಬ್ಬರ ಕಡೆಗೆ ನೋಡಿದರು. ನೋಡಹತ್ತಿದಂತೆ ಪರಸ್ಪರರ ಆತ್ಮಗಳು ನೇತ್ರಮಾರ್ಗವಾಗಿ ಒಬ್ಬರೊಬ್ಬರ ಶರೀರದೊಳಗೆ ಸೇರಿಕೊಂಡವೆಂದು ಅವರಿಗೆ ಭಾಸವಾಯಿತು.

ಉಸುಕಿನೊಳಗಿಂದ ಓಡುತ್ತಿರುವ ಮಂದಿಯನ್ನು ನೋಡಿದೊಡನೆಯೇ ಸುಧಾಕರನು ಈ ಸಮಾಧಿಯಿಂದ ಎಚ್ಚತ್ತನು. ಅಪರಾತ್ರಿಯಲ್ಲಿ ಈ ಜನರು ಹೀಗೇಕೆ ಓಡುತ್ತಿದ್ದಾರೆಂಬುದನ್ನು ನೋಡುವದಕ್ಕೋಸ್ಕರ ಅವನು ಮುಂದಾದನು. ಸುಧೆಯು ಅವನನ್ನು ಹಿಂಬಾಲಿಸಿದಳು.

ಎಲ್ಲರಿಗಿಂತ ಮುಂದೆ ಗಂಗಾಧರನಿದ್ದ. ಅವನ ಕೈಯ್ಯಲ್ಲಿ ಸುಮಾರು ಒಂದು ತಿಂಗಳ ಕೂಸು ಇತ್ತು. ಅವನ ಹಿಂದೆ ಜಗನ್ನಾಥ ಕ್ಷಿಡುತ್ತ ಬರುತ್ತಿದ್ದ ಎಲ್ಲಕ್ಕೂ ಹಿಂದೆ ಯಮುಳು ಉಬ್ಬಸಬಡುತ್ತ ಓಡಿಬರುತ್ತಿದ್ದಳು ಸುಧಾಕರನು ಗಂಗಾಧರನನ್ನು ತಡೆಯಲು ಕೈಯ್ಯಲ್ಲಿದ್ದ ಕೂಸನ್ನು ಉಸುಕಿನಲ್ಲಿ ಒಗೆಯುವವನಿದ್ದ. ಆದರೆ ಸುಧಾಕರನು ಅವನನ್ನು ಬಿಗಿಯಾಗಿ ಹಿಡಿದು ಕೈಯ್ಯೊಳಗಿನ ಕೂಸನ್ನು ಸುಧೆಗೆ ತೆಗೆದುಕೊಳ್ಳಲು ಸೂಚಿಸಿದನು. ಸುಧೆಯು ಮಗುವನ್ನು ತೆಗೆದುಕೊಳ್ಳುವಷ್ಟರಲ್ಲಿ ಜಗನ್ನಾಥ ಮತ್ತು ಯಮಿಯು ಅಲ್ಲಿಗೆ ಬಂದರು. ಗಂಗಾಧರನು ತುಂಬಾ ಜಗ್ಗಾಡಹತ್ತಿದನು. ಅವನನ್ನು ಹಿಡಿಯುವುದರಲ್ಲಿ ಅರ್ಥವಿಲ್ಲೆಂದು ಭಾವಿಸಿ ಬಿಟ್ಟುಕೊಟ್ಟನು. ಗಂಗಾಧರನು ಹಲ್ಲು ಕಡಿಯುತ್ತ ಬಯ್ಯುತ್ತ ಹೊರಟು ಹೋದನು.

ದಿನ್ನೆ ಹತ್ತುವಾಗ ಯಮು ಮತ್ತು ಜಗನ್ನಾಥರ ಕಡೆಯಿಂದ ಗಂಗಾಧರನ ವಿಷಯವಾಗಿ ಎಲ್ಲ ಮಾಹಿತಿ ತಿಳಿದವು. ಸಾಯಂಕಾಲ ಯಮುವಿಗೆ ತುಂಬಾ ಬಡೆತ ಬಡಿದು ರಾವಸಾಹೇಬರ ಮನೆಗೆ ಹೋದನು. ಹೋಗುವಾಗ ಹೆಂಡಕ್ಕೋಸ್ಕರ ಅವನು ಎಂಟಾಣೆ ಹಣ ಬೇಡಿದನು. ಇಂದು ರಾತ್ರಿ ನಿನಗೆ ತುಂಬಾ ಆಭರಣ ತಂದುಕೊಡುತ್ತೇನೆಂದು ಹೆಂಡತಿಗೆ ಆಶೆ ತೋರಿಸುವುದಕ್ಕೂ ಮರೆಯಲಿಲ್ಲ. ಆದರೆ ಯಮುವು ಅವನ ಕೈಗೆ ಒಂದು ಪೈಯನ್ನು ಸಹ ಹತ್ತಗೊಡಲಿಲ್ಲ. ಆಗ ಸಿಟ್ಟಿನಿಂದ ಹಲ್ಲುಕಡಿಯುತ್ತ ಹೊರಟುಹೋದ. ಆ ಮೇಲೆ ಸುಮಾರು ಹತ್ತು ಘಂಟೆಯ ಸುಮಾರಿಗೆ ಮತ್ತೆ ಮನೆಗೆ ಬಂದನು. ಆಗಲೂ ದುಡ್ಡು ಕೊಡಲಿಲ್ಲವೆಂದು ಅವನು ಹೆಂಡತಿಗೆ ಬಡಿಯಹತ್ತಿದನು. ಮತ್ತು ನಾಳೆ ಯಾರಾದರೂ ಬಂದು ಕೇಳಿದರೆ ತಾನು ಒಂಭತ್ತು ಘಂಟೆಯಿಂದ ಮನೆಯಲ್ಲಿಯೇ ಇದ್ದೆನೆಂದು ಹೇಳುವುದಕ್ಕೆ ಅವನು ಯಮೂಳಿಗೆ ಆಗ್ರಹ ಮಾಡಹತ್ತಿದ. ಆದರೆ ಅವನ ಹೊಡೆತದಿಂದ ಕೋಪಗೊಂಡ ಯಮುವು ನಿರಾಕರಿಸಲು, ಚಿಂದಿಯಲ್ಲಿ ಸುತ್ತಿದ ಮಗುವನ್ನೆತ್ತಿ ಬಾವಿಯಲ್ಲಿ ಹಾಕಲು ಓಡಿದನು. ಮರುಕ್ಷಣದಲ್ಲಿಯೇ ಕೂಸನ್ನು ಬಾವಿಗೆಸೆದರೆ ನಾಳೆಯೇ ಪತ್ತೆ ಹತ್ತಬಹುದೆಂಬ ವಿಚಾರ ಬಂದುದರಿಂದಲೋ ಏನೋ, ಸಮುದ್ರದ ಕಡೆಗೆ ಓಡಹತ್ತಿದನು. ಇದನ್ನು ಕಂಡು ಅಕ್ಕ ತಮ್ಮಂದಿರಿಬ್ಬರೂ ಗಂಗಾಧರನನ್ನು ಹಿಂಬಾಲಿಸಿದರು. ಕೇರಿಯಲ್ಲಿ ಸತ್ಯನಾರಾಯಣ ವ್ರತವಿದ್ದುದರಿಂದ ಮನೆಯವರೆಲ್ಲ ಅಲ್ಲಿಗೆ ಹೋಗಿದ್ದರು. ಹೀಗಾಗಿ ಮನೆಯಲ್ಲಿ ಯಾರೂ ಆತನ ಕಾಯಕಕ್ಕೆ ತೊಂದರೆ ಮಾಡುವಂತಿರಲಿಲ್ಲ. ಗಂಗಾಧರನ ಪಕ್ಷವನ್ನು ವಹಿಸಿದ್ದಕ್ಕಾಗಿ ಜಗನ್ನಾಥನಿಗೆ ಪಶ್ಚಾತ್ತಾಪವಾದದ್ದು ಆತನ ಮಾತಿನಿಂದ ಕಂಡುಬರುತ್ತಿತ್ತು. ಮನೆಗೆ ತಾಯಿ ಮಗು ಸುಖವಾಗಿರುವರೆಂದು ಸುದ್ದಿಯನ್ನು ಮುಟ್ಟಿಸಲು ಜಗನ್ನಾಥನಿಗೆ ಕಳಿಸಿ ಸುಧಾಕರನು ಯಮುವಿಗೆ "ಇಂತಹ ಗಂಡನಿಂದ ನಿನಗೆ ಹೇಗೆ ಸುಖ ದೊರೆತೀತು? ಇಂದು ನಿನ್ನ ಮಗುವನ್ನು ಸಮುದ್ರದಲ್ಲೊಗೆದರೆ ನಾಳೆ ನಿನ್ನನ್ನು ಬಾವಿಯಲ್ಲಿ ನೂಕಬಹುದು" ಎಂದನು.

ಯಮೂಳ ದೃಷ್ಟಿಯಲ್ಲಿ ದೈನ್ಯ ಒಡಮೂಡಿತ್ತು. ಸುಧಾಕರನ ಮುಂದೆ ಎರಡು ವ್ಯಕ್ತಿಗಳಿದ್ದರು. ಒಬ್ಬಳು ವಿಧವೆಯೆಂದು ದುಃಖಿಸುತ್ತಿದ್ದಳು. ಇನ್ನೊಬ್ಬಳು ಸಧವೆಯಾಗಿದ್ದರೂ ದುಃಖಿಯಾಗಿದ್ದಳು. ಸೌಭಾಗ್ಯದಂತಹ ಸುಖ ಇನ್ನಾವುದೂ ಇಲ್ಲವೆಂದು ಸಮಾಜದೊಳಗೆ ಪ್ರಚಲಿತವಿರುವ ಕಲ್ಪನೆಯು ಕಾಂಚನಮೃಗದಂತೆ ವಂಚಕವಿದೆಯೆಂಬ ವಿಚಾರ ಆತನ ಮನಸ್ಸಿನಲ್ಲಿ ಈಗ ಬಂದಿತು.

ಶಿವಮಂದಿರದ ಬಾಗಿಲಲ್ಲಿಯೇ ಜಾನಕಮ್ಮ ಸುಧೆಯನ್ನು ಸೊಸೆಯಾಗಿ ಸ್ವಾಗತಿಸಿದಳು. ಸುಧೆಯು ಅವರ ಪಾದಕ್ಕೆ ಬಿದ್ದು ಅಶ್ರುವಿನಿಂದ ಅಭಿಷೇಕ ಮಾಡಿದಳು.

× × × × ×

ಸುಧಾ ಮತ್ತು ಯಮುಳನ್ನು ಸ್ವಾಮಿಯವರ ಬಳಿಯಲ್ಲಿ ಬಿಡುವುದೇ ಲೇಸೆಂದೆನಿಸಿ ತಾಯಿಯನ್ನು ಕರೆದುಕೊಂಡು ಮನೆಗೆ ಬಂದನು. ಜಗನ್ನಾಥನು ತನ್ನ ಮನೆಗೆ ಹೋಗಿ ಬಂದ ಮೇಲೆ ಸುಧಾಕರನು ಅವನ ಹತ್ತರ ಕೆಲವು ಹಾಸಿಗೆ ಹೊದಿಕೆಗಳನ್ನು ಕೊಟ್ಟು ಶಿವಮಂದಿರದ ಕಡೆಗೆ ಕಳಿಸಿದನು. ಸುಧಾಕರನಿಗೆ ಅತ್ಯಾನಂದವಾದುದರಿಂದ ಕಾಳಿಗೆ ದಣುವಾಗಿರಬಹುದೆಂಬುದನ್ನೂ ಮರೆತು ತನ್ನ ಸಂಗತಿಗಳನ್ನೆಲ್ಲ ಹೇಳುವುದಕ್ಕಾಗಿ ಕೂಗಿ ಕರೆಯಹತ್ತಿದನು. ಆದರೆ ಕಾಳಿಗೂ ನಿದ್ದೆಯಿರದ್ದರಿಂದ ಸುಧಾಕರನ ಮೊದಲಿನ ಕರೆಗೇ ಹಾಸಿಗೆಯ ಮೇಲೆ ಎದ್ದು ಕುಳಿತನು. ಇಬ್ಬರೂ ನಡೆದ ಸಂಗತಿಗಳನ್ನೆಲ್ಲ ಮುಚ್ಚುಮರೆಯಿಲ್ಲದೆ ಹೇಳಿಕೊಂಡರು.

ವಾರುಣಿಯ ಸ್ವಭಾವದಲ್ಲಿ ಈಗ ನಾಲ್ಕಾರು ತಿಂಗಳಿಂದ ಬದಲಾವಣೆಯಾಗಿದೆಯೆಂದು ಸುಧಾಕರನು ಹೇಳಿದ್ದರಿಂದ ವಾರುಣಿಯ ಬಗ್ಗೆ ಕಾಳಿಗೆ ಇಮ್ಮಡಿ ಅಭಿಮಾನವೆನ್ನಿಸಿತು.

ಆ ಮೇಲೆ ಸುಧಾಕರನ ಹೊಸ ಶಿಕ್ಷಣ ಯೋಜನೆಯನ್ನು ಕುರಿತು ಮಾತುಕತೆಯಾಗಿ, ಕಾಳಿಯು ಆ ಕಾರ್ಯದಲ್ಲಿ ಸಂಪೂರ್ಣವಾಗಿ ಸುಧಾಕರನಿಗೆ ನೆರವಾಗಲು ಆಶ್ವಾಸನವನ್ನಿತ್ತನು.

ಬೆಳಗುಂಜಾವದ ಸುಮಾರಿಗೆ ಅವರಿಗೆ ನಿದ್ದೆಹತ್ತಿತು. ಆದರೆ ಆ ದಿನ ಅವರಿಗೆ ತುಂಬಾ ನಿದ್ದೆ ಬೀಳಬಾರದೆಂದೇ ದೈವೀ ಸಂಕಲ್ಪವಿರಬೇಕು. ಅವರು ಮಲಗಿ ಒಂದು ತಾಸು ಹೊತ್ತಾಗಿತ್ತೋ ಇಲ್ಲವೋ ಅಷ್ಟರಲ್ಲಿ ಬಾಗಿಲ ಬಳಿ ರಾವಸಾಹೇಬ, ದಾದಾಸಾಹೇಬ, ಮಧುಕರ ಇವರು ಬಂದುಬಿಟ್ಟರು.

"ಒಳ್ಳೇ ಸುಧಾರಣೆ ನಡಿಸಿರುವಿರಿ ನೀವು, ವ್ರಾಯದ ಹುಡುಗಿಯನ್ನು ರಾತ್ರೆ ಓಡಿಸಿಕೊಂಡು ಹೋಗುವುದಕ್ಕೆ ನಾಚಿಕೆ ಎನಿಸುವದಿಲ್ಲವೇ?" ದಾದಾಸಾಹೇಬರು ನುಡಿದರು.

"ಮತ್ತೆ ರಾತ್ರಿ ಹತ್ತು ಘಂಟೆಯ ಸುಮಾರಿಗೆ ವಾರುಣಿಯ ಭೆಟ್ಟಿಗೆ ಹೋದದ್ದೇಕೆ? ರಾಯರೇ, ತನ್ನ ಹೆಂಡತಿಯನ್ನು ನೀವು ಓಡಿಸಿಕೊಂಡು ಹೋಗಿದ್ದೀರೆಂದು ಈಗಷ್ಟೇ ಗಂಗಾಧರನೂ ಹೇಳುತ್ತಿದ್ದ." ರಾವಸಾಹೇಬರು ಒಳ್ಳೇ ಜೋರಿನಿಂದ ಕೇಳಿದರು.

"ಒಂದು ವಿಧವೆ, ಒಂದು ಕುಮಾರಿಕೆ, ಇನ್ನೊಂದು ಸಧವೆ. ಅಂದ ಬಳಿಕ ಇನ್ನೇನು ಉಳಿದ ಹಾಗಾಯಿತು?" ಮಧುಕರನು ಕುತ್ಸಿತತನದಿಂದ ಉದ್ಗರಿಸಿದನು. ಸುಧಾಕರನಿಗೆ ಸಂತಾಪವು ಹೆಚ್ಚುತ್ತಲೇ ಹೋಯಿತು.

"ರಾವಸಾಹೇಬರೇ, ನನ್ನ ಮೇಲೆ ಅನೀತಿಯ ಆರೋಪ ಹೊರಿಸುವುದಕ್ಕಿಂತ ಮುಂಚೆ ತಮ್ಮ ಕಾಲ್ಬುಡದಲ್ಲಿ ಏನು ಕೊಳೆಯುತ್ತಿದೆಯೆಂಬುದನ್ನಷ್ಟು ನೋಡಿ."

"ನನ್ನ ಕಾಲ್ಬುಡದಲ್ಲೇನಿದೆಯೆಂಬುದನ್ನು ನೋಡಿಕೊಳ್ಳಲು ನಾನು ಸಮರ್ಥನೇ ಇದ್ದೇನೆ. ಆದರೆ ನಿನ್ನೆ ರಾತ್ರಿ ನಾನು ಸ್ವತಃ ಕಣ್ಣಿನಿಂದ ನೋಡಿದುದರ ಬಗ್ಗೆ ಮೊದಲು ಜವಾಬು ಕೊಡಿ. ರಾತ್ರಿ ಹತ್ತು ಘಂಟೆಯ ಹೊತ್ತಿಗೆ ಆ ದಿನ್ನೆಯ ಮೇಲೆ ವಾರುಣಿಯನ್ನು ಭೆಟ್ಟಿಯಾಗುವ ಅಗತ್ಯವೇನಿತ್ತು?"

"ನಾನು ರಾತ್ರಿ ಹತ್ತು ಘಂಟೆಗೆ ವಾರುಣಿಯನ್ನು ಭೆಟ್ಟಿಯಾಗಲೇ ಇಲ್ಲ."

"ನಾವು ಸ್ವತಃ ನಿಮ್ಮನ್ನು ಕಂಡಿದ್ದೇವೆ. ಸಾಕ್ಷಿಗೆ ಬೇಕಾದರೆ ಗಂಗಾಧರನಿದ್ದಾನೆ. ಒಳ್ಳೆಯ ಮಾತಿನಿಂದ ಕ್ಷಮೆ ಬೇಡಿಕೊಂಡರೇ ಒಳ್ಳೆಯದಾಯಿತು. ಇಲ್ಲವಾದರೆ ಸಾಲೆಯಿಂದ ಹೊರಟು ಹೋಗಿ. ಎಂತಹ ನಿರ್ಲಜ್ಜರು!"

"ದಾದಾಸಾಹೇಬರೆ. ಹೆಚ್ಚುಕಡಿಮೆ ಮಾತಾಡುವ ಅಗತ್ಯವಿಲ್ಲ. ನನ್ನ ರಾಜಿನಾಮೆ ತೆಗೆದುಕೊಂಡು ಮನೆಯ ದಾರಿ ಹಿಡಿಯಿರಿ."

ಸುಧಾಕರನು ಕೂಡಲೇ ರಾಜಿನಾಮೆ ಗೀಚಿದನು. ರಾಜಿನಾಮೆ ಕೈಯಲ್ಲಿ ಬಿದ್ದ ಮೇಲೆ ದಾದಾಸಾಹೇಬರು, "ಸುಧೆಯನ್ನು ಎಲ್ಲಿ ಅಡಗಿಸಿಟ್ಟಿದ್ದೀರಿ" ಎಂದುಕೇಳಿದರು.

"ಸುಧೆಯು ಇನ್ನು ಮೇಲೆ ನಿಮ್ಮ ಮನೆಗೆ ತಿರುಗಿ ಬರಲಾರಳು"

"ನಿಮ್ಮ ಮೇಲೆ ಫಿರ್ಯಾದಿ ಕೊಟ್ಟೇನು?"

"ಸಂತೋಷವಾಗಿ ಕೊಡಬಹುದು."

"ನಮಗೆ ಫಿರ್ಯಾದಿ ಬೇಕಾಗಿಲ್ಲ. ಆದರೆ ನಿಮ್ಮಂತಹರ ಬೆನ್ನು ಬಿದ್ದರೆ ಆಯುಷ್ಯದ ಹಾನಿಯಾದೀತೆಂದು ಅವಳಿಗೆ ತಿಳಿಸಿ ಹೇಳತಕ್ಕದ್ದಿದೆ. ಏನೇ ಆದರೂ ನಮ್ಮ ಕರ್ತವ್ಯ ನಾವು ಮಾಡಲೇಬೇಕಾಗುತ್ತದೆ.' ಮಧುಕರನು ಸಂಭಾವಿತನಂತೆ ನುಡಿದನು.

ಸುಧಾಕರ ಮತ್ತು ಕಾಳೆ ಇವರಿಬ್ಬರಿಗೂ ಸುಧೆಯ ವಿಷಯದಲ್ಲಿದ್ದ ಅವನ ಒಣಸಹಾನುಭೂತಿಯನ್ನು ಕಂಡು ನಗು ಬಂದಿತು. 'ಇನ್ನು ನಾನು ನಿಮ್ಮವಳಲ್ಲ' ಎಂದು ಸುಧೆಯ ಬಾಯಿಂದಲೇ ಕೇಳಿದ ಹೊರತು ಈ ಕಟಕಟೆ ತಪ್ಪಲಿಕ್ಕಿಲ್ಲವೆಂಬುದನ್ನು ಲಕ್ಷ್ಯಕ್ಕೆ ತಂದು ಸುಧಾಕರನು ಅವರನ್ನು ಸುಧೆಯಬಳಿ ಕರೆದೊಯ್ಯಲು ಒಪ್ಪಿದನು. ಸುಧಾಕರನು ವಾರುಣಿಯನ್ನು ರಾತ್ರಿಭೆಟ್ಟಿಯಾದದ್ದು ಸಟೆಯೋ ದಿಟವೋ ಎಂದು ನಿರ್ಣಯಿಸಲು ರಾವಸಾಹೇಬರು ವಾರುಣಿಯನ್ನು ಕರೆಯಲು ಹೋದ

ರು. ಬರುವಾಗ ಗಂಗಾಧರನನ್ನೂ ಕರೆದುಕೊಂಡು ಬಂದರು. ಸುಧಾಕರನ ತಾಯಿಯೂ ಬರುವವಳಿದ್ದುದರಿಂದ ಆತ ಹಿಂದೇ ಉಳಿದನು.

ಕೆಲಹೊತ್ತಿನ ಮೇಲೆ ಎಲ್ಲರೂ ಶಿವಮಂದಿರದ ಕಡೆ ಹೊರಟರು. ದಾರಿಯಲ್ಲಿ ಯಾರೊಬ್ಬರು ಮಾತಾಡದಿದ್ದರೂ ವಾರುಣಿ ಮತ್ತು ಕಾಳಿಯವರ ಕಣ್ಣುಗಳು ಮೂಕ ಸಂಭಾಷಣೆಯನ್ನು ನಡಿಸಿದ್ದವು.

ಮಂದಿರದೊಳಗೆ ಸುಧಾ ಮತ್ತು ಯಮು ಕುಳಿತುಕೊಂಡಿದ್ದರು. ಜಗನ್ನಾಥನು ಅಕ್ಕನ ಮಗುವನ್ನು ಆಡಿಸುತ್ತ ದೂರ ನಿಂತಿದ್ದನು. ಸ್ವಾಮಿಯವರು ಪೌಳಿಯಲ್ಲಿ ಧ್ಯಾನಾಸಕ್ತರಾಗಿದ್ದರು.

ಎಲ್ಲರೂ ಬಂದದ್ದನ್ನು ನೋಡಿ ಸುಧಾ, ಯಮು ಎದ್ದು ನಿಂತರು. ಯಮುವನ್ನು ಕಂಡೊಡನೆಯೇ ಗಂಗಾಧರನು ಅವಳ ಮೈಮೇಲೆ ಹರಿಹಾಯ್ದನು. ಸುಧಾಕರ, ಕಾಳಿಯವರು ನಡುವೆ ತಡೆದದ್ದರಿಂದಲೇ ಅವಳು ಉಳಿದುಕೊಂಡಳು.

“ನೀನು ನನ್ನ ಹೆಂಡತಿಯಲ್ಲ ನಾನಿನ್ನ ಗಂಡನಲ್ಲ.’

ಆಕೆಯೇನೂ ಉತ್ತರ ಕೊಡಲಿಲ್ಲ.

“ನಾನು ನಿನ್ನ ಗಂಡನಲ್ಲದ ಮೇಲೆ ಕುಂಕುಮವನ್ನೇಕೆ ಹಚ್ಚಿದ್ದೀಯೆ. ಅಳಿಸು ಅದನ್ನು ಮೊದಲು”

ಗಂಗಾಧರನು ಮುಂದೆ ಹೋಗಿ ಆಕೆಯ ಕುಂಕುಮವನ್ನು ಒರಸುವುದರಲ್ಲಿದ್ದನು. ಆದರೆ ಅವನಿಗೆ ಆ ಕೆಲಸ ಮಾಡುವ ಕಷ್ಟ ತಪ್ಪಿತು. ಯಾಕೆಂದರೆ ಯಮುವೇ ತನ್ನ ಬಲಗೈ ನಡುಬೆರಳಿನಿಂದ ಕುಂಕುಮವನ್ನೊರಸಿದಳು. ಅದೇ ಹೊತ್ತಿಗೆ ಸ್ವಾಮಿಯವರೂ ಇತ್ತ ಹೊರಳಿ “ಮಗೂ, ಆ ಕುಂಕುಮವನ್ನು ಇವಳಿಗೆ ಹಚ್ಚು” ಎಂದರು.

“ಸುಧಾ, ಇದೇನು ನಡಿಸಿರುವಿ? ಒರಸು ಅದನ್ನು” ಎಂದು ದಾದಾಸಾಹೇಬರು ಚೀರಿದರು.

"ದಾದಾಸಾಹೇಬರೇ, ಸುಧೆಯು ನಿಮ್ಮ ತಂಗಿಯೆಂದು ಈ ರೀತಿ ತಿರಸ್ಕರಿಸಿ ಅಪಮಾನಮಾಡುವ ಮುಂಚೆ ನನ್ನ ಹೆಂಡತಿಯಿರುವಳೆಂಬುದನ್ನು ಮರೆಯಬೇಡಿರಿ."

ದಾದಾಸಾಹೇಬರು ಹತಾಶರಾದರು. ವಾರುಣಿಯು ಮುಂದೆ ಹೋಗಿ ತನ್ನ ಉಡುಗರೆಯೆಂದು ಸುಧೆಯ ಕೋಮಲಾಂಗುಳಿಯೊಳಗೊಂದು ಉಂಗುರವನ್ನಿಟ್ಟಳು. ಅದರ ಮೇಲೆ 'ಸುಧಾಕರ' ಎಂದು ಕೊರೆದಿತ್ತು.

ಇನ್ನು ರಾವಸಾಹೇಬರು ಸುಧಾಕರನ ಮೇಲೆ ಹರಿಹಾಯುವವರಿದ್ದರು. ಆದರೆ ಅಷ್ಟರಲ್ಲಿ ವಾರುಣಿಯು 'ನಿನ್ನೆ ರಾತ್ರಿ ತನಗೆ ಛಟ್ಟಿಯನ್ನಿತ್ತವರು ಸುಧಾಕರರಿರದೆ ಕಾಳಿಯವರು "ಎಂದು ಹೇಳಿದುದರಿಂದ ರಾವಸಾಹೇಬರು ಸುಮ್ಮನಿರಬೇಕಾಯಿತು. ಗಂಗಾಧರನ ಸಾಕ್ಷಿಯನ್ನು ದಾದಾಸಾಹೇಬರು ಮುಂದೆ ಮಾಡಿದರೂ ಪ್ರಯೋಜನವಾಗಲಿಲ್ಲ ಗಂಗಾಧರನೂ ಸ್ವಾಮಿಯವರ ಮುಂದೆ ಸುಳ್ಳಾಡುವುದು ಶಕ್ಯವಿರಲಿಲ್ಲ. ಯಾಕಂದರೆ ಹಿಂದೆ ನಾಲಾಪಲಿಯಲ್ಲಿ ಸ್ವಾಮಿಯವರೇ ಆತನ ಪ್ರಾಣ ಉಳಿಸಿದ್ದರು. ಗಂಗಾಧರನು ಪಶ್ಚಾತ್ತಾಪದಿಂದ ತಾನು ಮಾಡಿದ ತಪ್ಪುಗಳನ್ನೆಲ್ಲ ಒಪ್ಪಿಕೊಂಡನು.

"ಕಾಳಿ ಬಂದಿದ್ದನಂತೆ, ಕಾಳಿ! ಅವನೇನು ಬಿಲ್ಲಿಸ್ಟ್ರಾಕ್ಸ ಸಾಹೇಬರ ಮಗನೇ? ಅವನೊಡನೆ ಮದುವೆಯಾದರೆ ನಿನಗೇನು ಸಿಕ್ಕೀತು?" ಎಂದು ಒಂದೇಸಮನೆ ರಾವಸಾಹೇಬರು ಮಗಳಿಗೆ ಪ್ರಶ್ನೆ ಮಾಡಹತ್ತಿದರು. ಆದರೆ ಅವಳು ಒಂದಕ್ಕೂ ಉತ್ತರಿಸಲಿಲ್ಲ

ಈಗ ದಾದಾಸಾಹೇಬರಿಗೆ ನಾಳೆಯ ಚಿಂತೆ ಸುರುವಾಯಿತು. ಸುಧಾಕರನಂತಹ ಎಂ. ಎ. ನನ್ನು ಕಳೆದುಕೊಳ್ಳುವುದು ಯೋಗ್ಯವೆಂದೆನಿಸಲಿಲ್ಲ. "ಸುಧಾಕರ, ಆದದ್ದು ಆಗಿಹೋಯಿತು. ನಿಮ್ಮ ರಾಜೀನಾಮೆಯನ್ನು ಹಿಂತೆಗೆದುಕೊಳ್ಳಿ. ಅಂದರೆ ನಿಮಗೂ ನಾಳೆಗೂ ಕೂಡಿಯೇ ಒಳಿತಾದೀತು."

"ನನಗದರಲ್ಲಿ ಒಳಿತಾವುದೂ ಇಲ್ಲ ನಿಮ್ಮ ಸಾಲೆಯಲ್ಲಿ ಕೆಲಸ ಮಾಡುವ ಇಚ್ಛೆಯೇ ನನಗಿಲ್ಲ."

"ಹಾಗಾದರೆ ಇಲ್ಲಿ ಇನ್ನೊಂದು ಶಾಲೆ ಸ್ಥಾಪಿಸುವಿರಾ?"

"ಅದೇನೋ ನಿಜ. ಆ ಸಾಲೆಯಲ್ಲಿ ಸುಧಾ, ಯಮು, ಜಗನ್ನಾಥ, ಗಂಗಾಧರನಂತಹ ವಿದ್ಯಾರ್ಥಿಗಳು ಬರಬಹುದು. ತಮ್ಮ ಜೀವನವನ್ನು ಸಾಗಿಸಿ ಇನ್ನೊಬ್ಬರಿಗೆ ಹೇಗೆ ನೆರವಾಗಬೇಕೆಂಬ ಶಿಕ್ಷಣವನ್ನು ಪಡೆದು ದೇಶವನ್ನು ಸಮೃದ್ಧಿಗೊಯ್ಯುವರು."

"ಮನೋರಾಜ್ಯವನ್ನು ಏಕೆ ಕಟ್ಟುತ್ತೀರಿ? ಹಣವ ಹೊರತು ಇಂತಹ ಸಂಗತಿಗಳೊಂದೂ ನಡೆಯದು."

"ಸುಧಾಕರನ ಕಾರ್ಯ ನಾನಿರುವ ವರೆಗೆ ಹಣದ ಕೊರತೆಯಿಂದ ಎಂದೂ ಬಂದು ಬೀಳದು. ನನ್ನ ಗಿರಣಿಯ ವಾರ್ಷಿಕ ೫ಸಾವಿರ ರೂಪಾಯಿಯ ಉತ್ಪನ್ನ ಅವನ ನೆರವಿಗಿದೆಯೆಂಬುವನ್ನು ಮರೆಯಬೇಡಿ."

ರಾವಸಾಹೇಬರ ಮನಸ್ಥಿತಿಯು ೫ಸಾವಿರ ರೂಪಾಯಿ ಉತ್ಪನ್ನವನ್ನು ಕೇಳಿದೊಡನೆ ಬದಲಿಸಿತು. ಅವರು ಕಾಳಿಗೆ ಹಸ್ತಾಂದೋಲನವನ್ನಿತ್ತು "ಮಿ. ಕಾಳೆ, ನಾನು ಹೇಳಿದುದನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ತರುಣ ತರುಣಿಯರು ಹೀಗೆ ಏಕಾಂತದಲ್ಲಿ ಒಬ್ಬರಿಗೊಬ್ಬರು ಭೆಟ್ಟಿಯಾಗದ ಹೊರತು ಸಮಾಜದಲ್ಲಿ ಪ್ರೇಮವಿವಾಹವಾಗುವದೆಂತು? ಪ್ರೇಮ ವಿವಾಹದ ಹೊರತು ಸ್ವರಾಜ್ಯ ಸಿಗುವದು ಹೇಗೆ? ಇಂಗ್ಲಂಡಿನಲ್ಲಿ ಪ್ರೇಮವಿವಾಹವಿದೆಯೆಂದೇ ಸ್ವರಾಜ್ಯವಿದೆ. ನಮ್ಮ ಓಲ್ಡ್ ಫ್ರೊಕ್ಸ ಸಾಹೇಬರು ಅಲ್ಲಲ್ಲಿಯ ಎಷ್ಟೋ ಒಳ್ಳೊಳ್ಳೇ ಸಂಗತಿಗಳನ್ನು ಹೇಳುತ್ತಿದ್ದರು. ಅಲ್ಲಿ ಕದ್ದು ಭೆಟ್ಟಿಯಾಗುವದೇನು? ಚುಂಬಿಸುವದೇನು? ನೀವು ಬೇಕಾದರೆ ಜನ್ಮದ ಗಂಟು ಹಾಕಿಕೊಳ್ಳಿ. ನಾನೇನೂ ಬೇಡವೆನ್ನುವದಿಲ್ಲ."

ಮಧ್ಯದಲ್ಲಿಯೆ ರಾವಸಾಹೇಬರ ಹರಟೆ ಪ್ರಾರಂಭವಾದುದರಿಂದ ಸ್ವಾಮಿಯವರು ತಡೆದಿದ್ದರು. "ದಾದಾಸಾಹೇಬರೇ, ಸುಧಾಕರನ ಶಿಕ್ಷಣ ಕಾರ್ಯ ಹಣಕ್ಕೋಸ್ಕರ ತಡೆಯಬಹುದೆಂದೆಣಿಸಬೇಡಿರಿ. ಅವನಿಗೆ

ಕಾಳಿಯಂತಹ ಗೆಳೆಯರು ಸಹಾಯ ಮಾಡಿಯೇ ತೀರುವರು. ಅಲ್ಲದೆ ನನ್ನಂತಹ ಸನ್ಯಾಸಿಯು ಸಹ ಅವನಿಗೆ ನೆರವಾಗಬಹುದು."

ಸ್ವಾಮಿಯವರ ಧ್ವನಿ ಪರಿಚಿತವಾದಂತೆನಿಸಿತು. ಆದರೂ ದಾದಾ ಸಾಹೇಬರು ಹೇಗಾದರೂ ಮಾಡಿ ಸುಧಾಕರನ ಗೇಲಿಮಾಡಬೇಕೆಂದು ನಿಶ್ಚಯಿಸಿದ್ದರಿಂದ "ಸುಧಾಕರ, ಈ ಸನ್ಯಾಸಿಯನ್ನು ಸಹಾಯಕ್ಕೆ ತೆಗೆದುಕೊಂಡು ಅವರ ದಂಡವನ್ನು ಛಡಿಯಂತೆಯೂ, ಕಾವೀಶಾಟಿಯನ್ನು ಬೋರ್ಡ ಒರೆಸುವುದಕ್ಕೂ ಉಪಯೋಗಿಸಿ ನಿಮ್ಮ ಸಾಲೆಯನ್ನು ನಡೆಸಬಹುದು."

ಅದೇ ಹೊತ್ತಿಗೆ ಮಧುಕರ, ಸುಂದರಾಬಾಯಿಯವರು ಬಂದು ಮುಟ್ಟಿದರು.

"ದಾದಾಸಾಹೇಬರೇ, ಸಾವಂತವಾಡಿಯ ಸದುಭಾವು ವೈದ್ಯನು ತನ್ನ ಕಷ್ಟಾರ್ಜಿತ ಉತ್ಪನ್ನ ಸರ್ವಸ್ವವನ್ನು ಸುಧಾಕರನ ಹೊಸ ಸಾಲೆಗೆ ಕೊಡುತ್ತಿದ್ದಾನೆ. ತಿಳಿಯಿತೇ?"

'ಅಯ್ಯೋ ದೇವರೇ!' ಎಂದು ಚೀರಿದವಳೇ ಸುಂದರಾಬಾಯಿಯು ಕೆಳಕ್ಕೆ ಬಿದ್ದುಬಿಟ್ಟಳು.

"ಮಧುಕರಾ, ನಿನಗೆ ದೇವರ ಕೃಪೆಯಿಂದ ನಿನ್ನ ಹೊಟ್ಟೆ ತುಂಬುವಷ್ಟು ಶಿಕ್ಷಣ ದೊರೆತಿದೆ. ಜಗತ್ತಿನಲ್ಲಿ ಪಿತೃಕರ್ತವ್ಯ ತೀರಿದಂತಾಗಿದೆ. ತಂದೆಯು ಪಾಪದಿಂದ ಸಂಪಾದಿಸಿದ ಹಣವನ್ನು ಮಗನು ಪಾಪದಲ್ಲಿಯೇ ವೆಚ್ಚ ಮಾಡಬೇಕೆಂದೇನೂ ಇಲ್ಲ. ಬೆವರಿಳಿಸಿ ಗಳಿಸಿದ ಹಣ ಅಮೃತವಿರುತ್ತದೆ. ಆದರೆ ಪರರ ಹೊಟ್ಟೆ ಹೊಡೆದು ಸಂಚಯಿಸಿದ ಹಣವೇ ಹಾಲಾಹಲವಿರುತ್ತದೆ. ಅದ್ದರಿಂದ-ನಾನು ಪಾಪದಿಂದ ಗಳಿಸಿದ ಹಣವನ್ನು ಮಗನಿಗೋಸ್ಕರ ಇಡುವ ಇಚ್ಛೆ ನನಗಿಲ್ಲ. ಯಾವ ಬಡವರ ರಕ್ತ ಹಿಂಡಿ ಹಣ ಸಂಪಾದಿಸಿರುವೆನೋ, ಅಂತಹ ಹಣವನ್ನು ಸುಧಾಕರನಿಗೆ ಕೊಟ್ಟು ಬಡವರಿಗೆ ಸಂಜೀವನಿಯನ್ನು ದೊರಕಿಸಿಕೊಡುವೆನು. ನಾನು ಸನ್ಯಾಸ ಸ್ವೀಕರಿಸಿ ಹತ್ತು ವರ್ಷಗಳವರೆಗೆ ತಿರುಗಾಡಿದೆ. ಆದರೆ ಇಂದಿನಂತಹ ಶಾಂತಿ ನನಗೆ ಹಿಂದೆಂದೂ ದೊರೆತಿರಲಿಲ್ಲ.

ಇಂದು ನನಗೆ ದೇವದರ್ಶನವಾಯಿತು. ಹಣವನ್ನು ಕೂಡಿಡುವದಕ್ಕಿಂತ ಬಡವರಿಗೆ ಕೊಟ್ಟು ಬಿಡುವುದರಲ್ಲಿಯೇ ಅಧಿಕ ಸುಖವಿದೆಯೆಂದು ಇಂದು ಕಂಡುಕೊಂಡೆನು. ಈ ಕಾಂಚನಮೃಗದ ಹಿಂದೆ ಓಡುತ್ತ ಹೋಗಿ, ಸುಖದ ಪರ್ಣಕುಟಿಯನ್ನು ಬಿಟ್ಟು ನಾನು ದುಃಖದ ಅರಣ್ಯವನ್ನು ಸೇರಿದೆ. ಕಾಲಿಗೆ ಮುಳ್ಳು ನಟ್ಟಿತು. ಸುತ್ತಲೂ ಹಿಂಸ್ರ ಪಶುಗಳು ಕಾಡ ಹತ್ತಿದವು. ಆದರೂ ಹಿಂತಿರುಗುವ ಬುದ್ಧಿ ನನಗೆ ಬರಲಿಲ್ಲ. ಪ್ರಭೋ! ಇಂದು ನಿನ್ನ ಕೃಪೆಯಿಂದ ಈ ಕಾಂಚನಮೃಗದ ಮೋಹವನ್ನು ನಾನು ಸಂಪೂರ್ಣವಾಗಿ ಹರಿದು ಚೆಲ್ಲಿದ್ದೇನೆ. ನನ್ನ ಪರ್ಣಕುಟಿಯು ನನಗೆ ಕಾಣಹತ್ತಿತು.

ಸ್ವಾಮಿಯವರು ಶಿವಲಿಂಗಕ್ಕೆ ಸಾಷ್ಟಾಂಗ ನಮಸ್ಕಾರ ಹಾಕಿದರು. ಉಳಿದವರೆಲ್ಲರೂ ಅವರನ್ನು ಅನುಕರಿಸಿದರು

ಮುಗಿದುದು.



